# ಸಿದ್ಧಗಂಗಾ





ಸಂಪುಟ : ೩೯ ಡಿಸೆಂಬರ್ ೨೦೦೩ ಸಂಚಿಕೆ : ೧೨




ಬೇಲೂರಿನಲ್ಲಿ ನವೆಂಬರ್ ೧೯ರಂದು ನಡೆದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಸಮುದಾಯ ಭವನದ ಉದ್ಘಾಟನಾ ಸಮಾರಂಭ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ವೇದಿಕೆಯಲ್ಲಿ : ಪುಷ್ಪಗಿರಿಮಠದ ಪೂಜ್ಯ ಶ್ರೀ ಶ್ರೀ ನಂದೀಶ್ವರ ಶಿವಾರಾಧ್ಯ ಸ್ವಾಮಿಗಳು, ಸಂಸತ್ ಸದಸ್ಯ ಶ್ರೀ ಜಿ. ಪುಟ್ಟಸ್ವಾಮಿಗೌಡ, ಶಾಸಕ ಶ್ರೀ ಬಿ.ಬಿ. ಶಿವಪ್ಪ, ಕಾರ್ಯಾಧ್ಯಕ್ಷ ಶ್ರೀ ಬಿ.ಜಿ. ಚಂದ್ರಶೇಖರ್ ಮೊದಲಾದವರು.



ನೂತನವಾಗಿ ನಿರ್ಮಾಣಗೊಂಡ
ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಸಮುದಾಯ ಭವನ



ರಾಷ್ಟ್ರಕವಿ ಕುವೆಂಪುರವರ
ಜನ್ಮ ಶತಮಾನೋತ್ಸವ ವರ್ಷ



ಮುಖಪುಟ

*ಬೇಲೂರಿನಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಸಮುದಾಯ ಭವನದ ಉದ್ಘಾಟನಾ ಸಮಾರಂಭ. ರಾಷ್ಟ್ರಕವಿ ಡಾ. ಕುವೆಂಪು*


ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ದಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ದಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೯ ಡಿಸೆಂಬರ್ ೨೦೦೩ ಸಂಚಿಕೆ : ೧೨


## ಒಳಪುಟಗಳಲ್ಲಿ..........


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಶರಣೆಯರು-ಸಮಾಜಕಾರ್ಯ – ಡಾ. ಮಲ್ಲಿಕಾರ್ಜುನ ಶಿವಪ್ಪ ಲತ್ತೆ
೯. ವಚನಗಳ ವಿಶ್ಲೇಷಣೆ – ಸಂ. ಡಾ. ಎಲ್. ಬಸವರಾಜು
೧೦. ಹೆಸರು – ಟಿ.ಆರ್. ಮಹಾದೇವಯ್ಯ
೧೧. ದಾರ್ಶನಿಕ ಕವಿ ಡಾ. ಕುವೆಂಪು – ಎಚ್.ಎಸ್. ಸಿದ್ಧಗಂಗಪ್ಪ
೧೫. ಶರಣ ಸಾಹಿತ್ಯ ಮತ್ತು ಜಾನಪದ – ಪ್ರೊ. ಹೆಚ್.ವಿ. ವೀರಭದ್ರಯ್ಯ
೨೧. ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ಗೋವಿಂದರಾಜು ಅವರಿಗೆ 'ನಾಗರಿಕ ಸೇವಾ' ಪ್ರಶಸ್ತಿ
೨೩. ಸಾವಿನ ನಂತರ .......... – ಡಾ. ಎಂ.ಎಸ್. ರಾಜಣ್ಣ
೨೫. ಭಾರತ ಮತ್ತು ಯುವಕರ ಆತ್ಮಶಕ್ತಿ – ಕವಿತಾಕೃಷ್ಣ
೨೬. ಸಮಾರಂಭ
೨೮. ಕ್ಷೇತ್ರವಾರ್ತೆ



ವಿಳಾಸ :
''ಸಂಪಾದಕರು'', 'ಸಿದ್ದಗಂಗಾ' ಮಾಸಪತ್ರಿಕೆ
ಶ್ರೀ ಸಿದ್ದಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೬೦೦/- |
| ಬಿಡಿ ಪ್ರತಿ | ರೂ. ೧೦.೦೦ |



## ಬಸವ ಕಲ್ಯಾಣದ ಅಭಿವೃದ್ಧಿ ಪ್ರಾಧಿಕಾರ....

'ಬಸವ ಕಲ್ಯಾಣ ಅಭಿವೃದ್ಧಿ ಪ್ರಾಧಿಕಾರ'. ಸ್ಥಾಪಿಸುವ ಮೂಲಕ ಕರ್ನಾಟಕದ ಸನ್ಮಾನ್ಯ ಶ್ರೀ ಎಸ್.ಎಂ. ಕೃಷ್ಣರವರ ಘನಸರ್ಕಾರ ಅಭಿನಂದನೀಯ ಕಾರ್ಯವನ್ನು ಮಾಡಿದೆ. ಬಸವತತ್ವಾಭಿಮಾನಿಗಳೆಲ್ಲರ ಸಂತೋಷಕ್ಕೆ ಸರ್ಕಾರ ಕಾರಣವಾಗಿದೆ. ರಾಜ್ಯದ ಹೃದಯವಂತರೆಲ್ಲ ಈ ನಿರ್ಧಾರವನ್ನು ಸ್ವಾಗತಿಸುವುದರಲ್ಲಿ ಎರಡು ಮಾತಿಲ್ಲ.

ಬಸವ ಕಲ್ಯಾಣ ಜಗತ್ತಿಗೇ ದಾರಿತೋರಿದ ಪುಣ್ಯಭೂಮಿ. ಬಸವಣ್ಣನವರು ಬಾಳಿ ಬೆಳಗಿದ ತನ್ನ ಸಾರ್ವಕಾಲಿಕ ಕಾಯಕ, ದಾಸೋಹ, ಅಸ್ಪೃಶ್ಯತಾ ನಿವಾರಣೆ, ಲಿಂಗಭೇದನಿರಾಕರಣೆ, ವರ್ಗ, ವರ್ಣಭೇದ ನಿರಾಕರಣೆ, ದೇವಾಲಯಗಳ ನಿರಾಕರಣೆ, ಮಾನವೀಯತೆಗಳನ್ನು ಬಿತ್ತಿ ಬೆಳೆದದ್ದು ಕಲ್ಯಾಣದಲ್ಲಿ. ಬಸವಣ್ಣ ವೀರಶೈವ ಧರ್ಮದವನಾದರೂ ವೀರಶೈವದ ಅರ್ಥವ್ಯಾಪ್ತಿಯನ್ನು, ಧರ್ಮದ ಎತ್ತರ ಬಿತ್ತರಗಳನ್ನು ವಿಸ್ತರಿಸಿದವನು. ಸಮಾನತೆಯ ಶಾಂತ ಭಾಸ್ಕರನಾಗಿ ಬೆಳಗಿದವನು. ''ಬೇಡುವವರಿಲ್ಲದ'' ಕಲ್ಯಾಣ ನಿರ್ಮಾಣಮಾಡಿ ಪ್ರಜಾಪ್ರಭುತ್ವವಾಗಿ ಜನಮನದಲ್ಲಿ ನೆಲೆನಿಂತವನು. ''ಹೊಲೆಯ-ಮಾದಿಗರೆಂಬ ಬಲೆಯ ಕಿತ್ತೊಗೆದ'' ಅಖಂಡ ಎದೆಗಾರ. ಬಸವತತ್ವಗಳು ಈ ಶತಮಾನಕ್ಕೂ ಪ್ರಸ್ತುತ. ಮಾನವಶಕ್ತಿ ನಷ್ಟವಾಗದಂತೆ ಕಾಯಕತತ್ವವನ್ನು ಗೌರವಿಸಿದ ದ್ರಷ್ಟಾರ ಬಸವಣ್ಣ.

ಕನ್ನಡಿಗರಿಗೆ ಅಭಿಮಾನ ಕಡಿಮೆಯೆನ್ನುತ್ತಾರೆ ಲೋಕಾನುಭವ ಸಂಪನ್ನರು. ಕಲ್ಯಾಣವನ್ನು ಪುನರ್ನಿರ್ಮಾಣ ಮಾಡಬೇಕೆಂಬ ಭಾವನೆ ಸರ್ಕಾರಕ್ಕೆ ತಡವಾಗಿ ಅರಿವಾಗುವುದಕ್ಕೆ ಕಾರಣ ಕನ್ನಡಿಗರೇ, ಬಸವತತ್ವ ಪ್ರೇಮಿಗಳೇ ಎಂದರೆ ತಪ್ಪಾಗದು. ಎಂದೋ ಆಗಬೇಕಾಗಿದ್ದ ಪ್ರಾಧಿಕಾರ ಈಗಲಾದರೂ ಆಯಿತಲ್ಲಾ ಎಂದು ಸಮಾಧಾನಪಡುವಂತಾಗಿದೆ. ಇದರ ಜೊತೆಗೆ ಕರ್ನಾಟಕದ ಉದ್ದಗಲದಲ್ಲಿ ವೀರಶೈವ ಮಠಗಳಿವೆ, ಮಠಾಧಿಪತಿಗಳಿದ್ದಾರೆ. ಬಸವರಾಜಮಾರ್ಗಾನುಯಾಯಿಗಳಾಗಿದ್ದಾರೆ. ಬಸವ ಕಲ್ಯಾಣದ ಪುನರುದ್ಧಾರಕ್ಕೆ ಅವರೆಲ್ಲ ಈಗ ಮುಂದಾಗಬೇಕು, ಸರ್ಕಾರದೊಡನೆ ಸಹಕರಿಸಬೇಕು. ಅಂದಿನ ಕವಿ ವಿಜ್ಞಾನೇಶ್ವರ ಹೇಳಿದಂತೆ 'ನ ಭೂತೋ ನ ಭವಿಷ್ಯತಿ ಕಲ್ಯಾಣಪುರಂ' – ಎಂಬಂತೆ ಬಸವಕಲ್ಯಾಣ ರಾಷ್ಟ್ರದ ಮಹತ್ವದ ಪ್ರೇಕ್ಷಣೀಯ ಸ್ಥಳವಾಗುವಂತೆ, ಬಸವಾದಿಶರಣರ ಶುಭವಾಣಿ ಮರುಧ್ವನಿಸುವಂತೆ ಮಾಡಬೇಕು. ವಿಶ್ವದ ಮೊದಲ ಧಾರ್ಮಿಕ ಸಂಸತ್ತನ್ನು – 'ಅನುಭವಮಂಟಪ'ವನ್ನು ಸಂಸ್ಥಾಪಿಸಿದ ಕಲ್ಯಾಣವನ್ನು ಸ್ಮರಣೀಯಗೊಳಿಸಬೇಕು. ಉಳಿದಿರುವ ಬಿಜ್ಜಳನ ಅರಮನೆಯನ್ನು ಸುಸ್ಥಿತಿಗೆ ತರುವುದಾಗಬೇಕು. ಹರಳಯ್ಯ, ಮಡಿವಾಳಮಾಚಿದೇವ, ಪ್ರಭುದೇವರ ಗದ್ದುಗೆಗಳಿರುವ ಸ್ಥಳಗಳನ್ನು ಪಾವಿತ್ರ್ಯತೆಗೆ ತೊಂದರೆಯಾಗದ ರೀತಿಯಲ್ಲಿ ನವೀಕರಿಸಬೇಕು. ವಚನಸಾಹಿತ್ಯ ಸಂಗ್ರಹಾಲಯ, ಸಂಶೋಧನಾಲಯ, ವಚನ ಸಂಗೀತ ಮಹಾವಿದ್ಯಾಲಯ, ನಿತ್ಯದಾಸೋಹಮಂದಿರ, ಬಸವಣ್ಣನವರರಿದ್ದ ಮಹಾಮನೆ, ಮುಂತಾಗಿ ಎಲ್ಲವೂ ಅಭಿಮಾನದ ದ್ಯೋತಕಗಳಾಗಿ ಎದ್ದುನಿಲ್ಲಬೇಕು. ಕೇವಲ ಸರ್ಕಾರವನ್ನೇ ಹೊಣೆ ಮಾಡಿದರೆ ಸಾಲದು, ಕನ್ನಡಿಗರೆಲ್ಲರ, ಬಸವ ತತ್ವಾಭಿಮಾನಿಗಳೆಲ್ಲರ ನೈತಿಕ ಜವಾಬ್ದಾರಿ ಕಲ್ಯಾಣದ ಪುನನಿರ್ಮಾಣದಲ್ಲಿ ಇದೆ ಎಂಬುದನ್ನು ಮರೆಯಬಾರದು.

– ಸಂಪಾದಕ







## ಸರಳ ಜೀವನ

*ಮೂರ್‍ನಾಲ್ಕು ವರ್ಷಗಳ ಹಿಂದಿನ ಮಾತು. ನಮ್ಮ ಪೂಜ್ಯ ಗುರುಗಳ ಪುಣ್ಯಾರಾಧನಾ ಸಮಾರಂಭ ಸಂದರ್ಭ. ಸಕಲೇಶಪುರದ ಕಾಲೇಜೊಂದರಿಂದ ಆಹ್ವಾನಿತಳಾಗಿದ್ದ ಒಬ್ಬ ಹೆಣ್ಣು ಮಗಳು ಸಮಾರಂಭದಲ್ಲಿ ಉಪನ್ಯಾಸಮಾಡುತ್ತ ಒಂದು ಮಾತು ಹೇಳಿದರು. ''ಇಂದು ಭ್ರಷ್ಟಾಚಾರ ಹೆಚ್ಚುವುದಕ್ಕೆ ಬಹುಮಟ್ಟಿಗೆ ಮಹಿಳೆಯರೇ ಕಾರಣವಾಗಿದ್ದೇವೆ. ಎಲ್ಲ ಮಹಿಳೆಯರೂ ಎಂದು ಹೇಳುತ್ತಿಲ್ಲ. ಆದರೆ ಬಹುಮಟ್ಟಿನ ಮಹಿಳೆಯರು ವೈಭವದ ಜೀವನಾಕಾಂಕ್ಷಿಗಳಾಗಿರುವುದೇ ಪುರುಷರು ಭ್ರಷ್ಟಾಚಾರಿಗಳಾಗುವುದಕ್ಕೆ ಕಾರಣ'' – ಎಂದರು. ಇದನ್ನು ಇಂದಿನ ಮಹಿಳೆಯರು ಗಂಭೀರವಾಗಿ ಚಿಂತಿಸಬೇಕು. ಸರಳ ಜೀವನ ಮಾರ್ಗಾವಲಂಬಿಗಳಾದರೆ ಭ್ರಷ್ಟತೆ ತಾನೇ ತಾನಾಗಿ ಇಳಿಮುಖವಾಗುತ್ತದೆ. ನೆರೆಹೊರೆಯವರ ಜೀವನಶೈಲಿಯನ್ನು ನೋಡಿ ಎಲ್ಲರೂ ಭೋಗ ಜೀವನಾಕಾಂಕ್ಷಿಗಳಾಗುವುದು ಎಷ್ಟು ಸರಿ? ಸರಳವಾಗಿ ಬದುಕುವುದಕ್ಕೆ ಎರಡು ಹೊತ್ತಿನ ಊಟ, ಮೈಮುಚ್ಚಿಕೊಳ್ಳಲು ಬಟ್ಟೆ, ವಾಸಿಸಲು ಸಾಧಾರಣವಾದ ಒಂದು ಮನೆ ಸಾಕಾಗುವುದಿಲ್ಲವೆ? ಟಿ.ವಿ. ಇಲ್ಲದೆ, ವಾಷಿಂಗ್ ಮಷೀನ್ ಇಲ್ಲದೆ, ಏರ್‌ಕೂಲರ್ ಇಲ್ಲದೆ ಬದುಕಲಾಗದೆ? ನಮ್ಮ ಪೂರ್ವಿಕರು ಇವಿಲ್ಲದೆ ನೆಮ್ಮದಿಯಿಂದ ಬಾಳಲಿಲ್ಲವೆ? ಎಂದು ಹೇಳಿದರು. ಹೌದೆನಿಸುತ್ತದೆ. ಭ್ರಷ್ಟಾಚಾರ ನಿಯಂತ್ರಣ ಸಂಸ್ಕೃತಿಯ ರಕ್ಷಣೆ, ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಯಲ್ಲಿ ಮಹಿಳೆಯರ ಪಾತ್ರ ಮಹತ್ವವಾಗಿದೆ. ಮಹಿಳೆಯರು ಮನಸ್ಸುಮಾಡಿದರೆ ಭ್ರಷ್ಟಾಚಾರವನ್ನು ನಿರ್ಮೂಲನೆ ಮಾಡಬಹುದು. ಅಪಮಾರ್ಗದಿಂದ ಪುರುಷರು ಗಳಿಸಿತರುವ ಸಂಪಾದನೆಯನ್ನು ತಿರಸ್ಕರಿಸಿದರೆ ಸಾಕು. ಎಲ್ಲ ತಂತಾನೆ ಸರಿಹೋಗುತ್ತದೆ. ಹನ್ನೆರಡನೆಯ ಶತಮಾನದ ಶಿವಶರಣೆ ಆಯ್ದಕ್ಕಿ ಲಕ್ಕಮ್ಮನ ಸತ್ಯಶುದ್ಧ ಕಾಯಕದ ಮಾರ್ಗ ಇಂದಿನ ಮಹಿಳೆಯರದಾಗಬೇಕು. ''ಆಸೆಯೆಂಬುದು ಅರಸಿಂಗಲ್ಲದೆ ಈಸಕ್ಕಿಯಾಸೆ ನಮಗೇಕೆ ಈಶ್ವರನೊಪ್ಪ'' ಎಂಬ ದೃಢನಿರ್ಧಾರಬೇಕು. ಆಯ್ದಕ್ಕಿಮಾರಯ್ಯ ಹೆಚ್ಚು ಅಕ್ಕಿಯನ್ನು ತಂದಾಗ ತಾಯಿ ಹೇಳಿದ ಈ ಮಾತು ಸರಳ ಜೀವನಕ್ಕೆ, ಸತ್ಯ ಸುಂದರ ನೆಮ್ಮದಿಯ ಬದುಕಿಗೆ ದಾರಿದೀಪ.*

❄

ಓಂ



# ಶ್ರೀ ಸಿದ್ಧಲಿಂಗೇಶ್ವರ ವಚನ

*ನೂಲೆಳೆಯ ತೋರಪಶುವಿಂಗೆ*
*ಮೇರುವಿಯ ತೋರದ ಕೆಚ್ಚಲು ನೋಡ ಅಯ್ಯ!*
*ಅದಕ್ಕೆ ಕೋಡೆರಡಿಲ್ಲ ನೋಡಾ.*
*ಅದು ಮೊಲೆಗೊಕ್ಕುಳ ಹಾಲ ಕರೆವುದು.*
*ಕರೆವಾಕೆಗೆ ಕೈಯಿಲ್ಲ;*
*ಕುಡಿವಾತಗೆ ಬಾಯಿಲ್ಲ ನೋಡಾ*
*ಕೈಯಿಲ್ಲದೆ ಕರೆದು*
*ಬಾಯಿಲ್ಲದೆ ಉಂಡು*
*ತೃಪ್ತಿಯಿಲ್ಲದೆ ಪರಿಣಾಮಿಸಬಲ್ಲಾತನಲ್ಲದೆ*
*ಶಿವಶರಣನಲ್ಲ ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !*

ತಾವರೆಯ ನಾಳದಷ್ಟು ಜೀವನೆಂಬ ಪಶುವಿಗೆ ಅತಿದೊಡ್ಡದಾದ ಕೆಚ್ಚಲಿದೆ. ಆ ಜೀವನಿಗೆ ಸುಜ್ಞಾನೋದಯವಾಗಿ ಅಹಂಕಾರ ಮಮಕಾರಗಳೆಂಬ ಕೊಂಬುಗಳು ನಷ್ಟವಾಗಿವೆ. ಆ ಪುಣ್ಯ ಜೀವನಿಗೆ ಸತ್ಕ್ರಿಯಾಸ್ವರೂಪವಾದ ಸ್ಥೂಲತನುವು, ನಿತ್ಯಸ್ವರೂಪವಾದ ಚತುರ್ವಿಧ ಭಕ್ತಿಯಿಂದ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ತನ್ನದಾಗಿಸಿಕೊಂಡಿದ್ದಾನೆ. ಆ ಚತುರ್ವಿಧ ಪುರುಷಾರ್ಥಗಳ ಪ್ರಯೋಜನವನ್ನು ಅನುಭವಿಸುತ್ತಿರುವ ಶರಣಸತಿಗೆ ಕೆಟ್ಟ ಮನಸ್ಸು ಮತ್ತು ಹಸ್ತಗಳ ವರ್ತನೆಯುಂಟಾಗದು. ಅಂತಹ ಶರಣನ ಮುಖದಲ್ಲಿ ಅನುಭವಿಸುವ ಪರಶಿವಲಿಂಗಕ್ಕೆ ಭಿನ್ನವಾದ ಆಸೆ, ಅಪೇಕ್ಷೆಗಳು ಉಂಟಾಗುವುದಿಲ್ಲ. ಹಾಗೆ ಕುಚಿತ್ತ ಕುಹಸ್ತ ಮುಕ್ತನಾದ ಶರಣ ಚತುರ್ವಿಧ ಪುರುಷಾರ್ಥಗಳನ್ನು ಪಡೆದು ಭಿನ್ನ ಆಸೆಯಿಲ್ಲದವನಾಗಿ, ಶಿವಾಪೇಕ್ಷಿತನಾಗಿ, ಜೀವತೃಪ್ತಿಗಾಣಿಸದೆ, ಸಂತೋಷಿಸುವವನೇ ಶರಣನೆನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಜ್ಞಾನಿ ಸ್ವತಂತ್ರನು ನಾನಲ್ಲ ಗುರುತಂದೆ
ನೀವಿಡಿದ ಅರಿವಿನ ನೆರಳೆಂಬೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರಸ್ಥಲದ ತೇಜದಲಿ ಪ್ರಜ್ವಲಿಪತೇಜವೆ
ಉರಸ್ಥಲದ ಸಿರಿಯಾದ ಶಿವ ಪ್ರಭೆಯೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವವಿಲ್ಲದ ಬಯಲೆ ತೆರಹಿಲ್ಲದ ಶ್ರೀ ಘನವೆ
ನಿಂದ ನಿಜಪದದ ನಿಚ್ಚಳವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿದ್ದೆ ಎಚ್ಚರಗಳು ಸೇವಾ ಶಿವಂತ್ರವ
ನಿತ್ಯ ನಿರಂತರ ಜಪಿಸಿರುವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆರು ದರುಶನದೊಡೆಯ ಆರುಸ್ಥಲಗಳಲರಲಿ
ಆರರರಿಯದಂತೆ ನಗುತಿರುವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಾಚಾರದ ಸುವಿಚಾರವನರಿಯದೆ
ಹಸಗೆಟ್ಟು ಹೋಗಿಹುದು ಜಗವೆನುವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಷ್ಟ ಪ್ರಸಾದದ ನಿಷ್ಠೆಯನರುಹಿದ
ಪ್ರಾಣ ಪ್ರಸಾದದ ಪ್ರಣವನೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವ ಪ್ರಸಾದದ ಭಕ್ತಿಯನರುಹಿದ
ನಿತ್ಯ ಪ್ರಸಾದದ ನಿರ್ಮಲನೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಡಿವಾಳಯ್ಯನಸ್ಮರಿಪ ಮಡಿಮನದ ಮಹಿಮನೆ
ಮಡಿಮಾಡುತಿರುವೆ ಮನಗಳನು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಡಪದಪ್ಪಣ್ಣಗಳ ದೃಢಮನದಿ ನೆನೆಯುವ
ದುಡಿದುಂಬ ಕಲೆಯ ಕಲಿಸುವ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಶರಣೆಯರು-ಸಮಾಜಕಾರ್ಯ

– ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ
ನಿವೃತ್ತ ಪ್ರಾಧ್ಯಾಪಕರು,
ಗುಲ್ಬರ್ಗಾ ವಿಶ್ವವಿದ್ಯಾನಿಲಯ,
ಗುಲ್ಬರ್ಗಾ.

ಮನುಷ್ಯ ಒಂಟಿಯಾಗಿ ಬಾಳಲಾರನು, ಅವನು ಎಂದಿನಿಂದಲೂ ಸಂಘಜೀವಿ. ತಂದೆ-ತಾಯಿ, ಬಂಧು-ಬಳಗ, ಗಂಡ-ಹೆಂಡತಿ, ಮಕ್ಕಳು-ಮೊಮ್ಮಕ್ಕಳು ಹೀಗೆ ಸಂಬಂಧ ಕೌಟುಂಬಿಕವಾಗಿ ಬೆಳೆದಂತೆ-ಸಾಮಾಜಿಕವಾಗಿಯೂ ನೆರೆ-ಹೊರೆಯವರು, ಕೇರಿ-ಊರು, ತಾಲ್ಲೂಕು-ಜಿಲ್ಲೆ, ರಾಜ್ಯ-ರಾಷ್ಟ್ರ-ಹೀಗೆ ಬೆಳೆಯುತ್ತ ಹೋಗುತ್ತದೆ.

ಅನಾಗರಿಕತೆಯಿಂದ ನಾಗರಿಕತೆಯತ್ತ ದಾಪುಗಾಲು ಹಾಕುವಾಗಲೂ, ಭೂಮಿಯಿಂದ ಆಕಾಶಕ್ಕೆ ಹಾರಾಡುತ್ತ ಮನುಷ್ಯನು ಚಂದ್ರಲೋಕ ತಟ್ಟಿ-ಮುಟ್ಟಿ ಬರುವ ಇಂದಿನ ವೈಜ್ಞಾನಿಕ ದಿನಮಾನಗಳಲ್ಲೂ ಪುರಷರಷ್ಟೇ ಸರಿಸಮವಾಗಿ ಸ್ತ್ರೀಯರೂ ದೈನಂದಿನ ಜೀವನದ ಕ್ರಿಯೆಗಳೊಂದಿಗೆ ಸಾಮಾಜಿಕ ಕಾರ್ಯಗಳಲ್ಲಿಯೂ ಸಕ್ರಿಯವಾಗಿ ಭಾಗವಹಿಸುತ್ತ ಬಂದಿದ್ದಾರೆ.

ಪ್ರತಿಯೊಂದು ಸಮಾಜವು ಹಲವಾರು ಸಂಪ್ರದಾಯ-ಲೋಕರೂಢಿ ಮತ್ತು ನೀತಿ-ನಿಯಮಗಳನ್ನು ಬೆಳೆಸಿಕೊಂಡು ಬಂದಿರುತ್ತದೆ. ಕೆಲವೊಂದು ರೂಢಿ, ಸಂಪ್ರದಾಯಗಳು ಕೆಲವರಿಗೆ ಹಿಡಿಸದಿದ್ದರೂ ಬಹಳಷ್ಟು ಜನರು ಒಪ್ಪಿಕೊಂಡದ್ದರಿಂದ ಅವು ಸಾರ್ವತ್ರಿಕ ಮನ್ನಣೆ ಪಡೆದುಕೊಂಡು ಚಲಾವಣೆಯಲ್ಲಿರುತ್ತವೆ. ಕಾಲಾಂತರದಲ್ಲಿ ಅಂಥ ರೂಢಿ- ಸಂಪ್ರದಾಯಗಳೇ ನೀತಿ-ನಿಯಮಗಳಂತೆ ರೂಢಿಗತವಾಗುತ್ತವೆ. ಈ ನೀತಿ ನಿಯಮಗಳು ಇಲ್ಲದಿದ್ದಲ್ಲಿ ಅಂಥ ಸಮಾಜದಲ್ಲಿ ವ್ಯಕ್ತಿಯ ರಕ್ಷಣೆಯಾಗುವುದೆಂದು ಹೇಳಲುಬಾರದು. ಅದು ಅಸಾಧ್ಯದ ಮಾತು. ಸಾಮಾಜಿಕ ಜೀವನವೂ ಕುಂಠಿತವಾಗುತ್ತದೆ. ಸಮಾಜದಲ್ಲಿಯ ಜನರ ಕಲ್ಯಾಣಕ್ಕಾಗಿ ನೈತಿಕ ನೀತಿ-ನಿಯಮಗಳು ಬೇಕೇ ಬೇಕು. ನೆತಿಕ ನೆಲೆಗಟ್ಟಿನ ಮೇಲಿರುವ ಇಂಥ ನಿಯಮಗಳು ಮಾನವನಿಗೆ ಇಲ್ಲದಿದ್ದ ಪಕ್ಷದಲ್ಲಿ ಅಂಥವರ ಜೀವನ ಪಶುಸಮಾನವೆನಿಸುತ್ತದೆ.

ನೈತಿಕ ನಿಯಮಗಳು ಧಾರ್ಮಿಕ ಭಾವನೆಯಿಂದ ಕೂಡಿದ್ದು ಸಮಾಜದಲ್ಲಿ ಅವು ಬೆಳೆದುಬಂದಿರುತ್ತವೆ. ಹಿಂದೂ, ಕ್ರೈಸ್ತ, ಮುಸಲ್ಮಾನ ಮೊದಲಾದ ಪ್ರತಿಯೊಂದು ಸಮಾಜದಲ್ಲೂ ಅವರದೇ ಆದ ಕೆಲವೊಂದು ನೀತಿ ನಿಯಮಗಳು ಇದ್ದವುಗಳೇ. ಹಿಂದೂ ಧರ್ಮದಲ್ಲಿರುವ ಪತಿವ್ರತಾ ಆಚರಣೆ, ಕ್ರೈಸ್ತರ ಟೆನ್ ಕಮಾಂಡಮೆಂಟ್ಸ್ ಇಂಥ ನಿಯಮಗಳ ಪಾಲನೆಯಿಂದ ಆಯಾಧರ್ಮದ ಜನತೆ ನೆಮ್ಮದಿಯಿಂದ ಬಾಳುತ್ತಲಿರುತ್ತಾರೆ. ಅಂಥ ಧರ್ಮಗಳು, ಸಮಾಜಗಳು ಪ್ರಗತಿಶೀಲವಾಗಿರುತ್ತವೆ. ಸಮಾಜ ಹಾಕಿಕೊಟ್ಟ ನೀತಿ-ನಿಯಮಗಳನ್ನು ಪಾಲಿಸುವವರಿಗೆ ಸಮಾಜದಲ್ಲಿ ಹೆಚ್ಚಿನ ಗೌರವ, ಮನ್ನಣೆಯೂ ಇರುತ್ತವೆ.

ಸಮಾಜ ಅತ್ಯಂತ ವಿಶಾಲವಾದದ್ದು, ವಿಶ್ವವ್ಯಾಪಿಯುಳ್ಳದ್ದು, ವೈವಿಧ್ಯಪೂರ್ಣವಾದದ್ದು; ಅದು ನಿತ್ಯ ಪರಿವರ್ತನಶೀಲವಾದದ್ದು. ಸಮಾಜವು ಮಾನವನ ಸಾಮಾಜಿಕ ಚಟುವಟಿಕೆಗಳನ್ನು ನಿರ್ಬಂಧಿಸುವ ಲೋಕರೂಢಿಗಳ, ನೀತಿನಿಯಮಗಳ ಆಂತರಿಕ, ಅವಲಂಬನದ ಮತ್ತು ಸ್ವಾತಂತ್ರ್ಯದ ಒಂದು ರಚನೆ ಅಥವಾ ಕ್ರಮವಾಗಿದೆ. ಅಂತೆಯೆ ಸಮಾಜದ ಸದಸ್ಯರಲ್ಲಿ ಪರಸ್ಪರ ಹೊಂದಾಣಿಕೆ, ಸಹಕಾರ, ಕೊಡುಕೊಳಿಕೆ ಸಹಜವಾಗಿ ಇರಬೇಕಾಗುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ಸಮಾಜದಲ್ಲಿದ್ದ ಏರು-ಪೇರುಗಳನ್ನು, ಸಂಕೋಚ ಭಾವನೆಯನ್ನು ಹೋಗಲಾಡಿಸಲು ಬಸವಾದಿ ಶರಣರು ಕ್ರಾಂತಿಯನ್ನೇ ಮಾಡಿದರು. ಯಾವುದೇ ಕಾಯಕ ಕೈಕೊಂಡಿರಲಿ. ಮೇಲು-ಕೀಲು ಭಾವನೆಯನ್ನು ಹೋಗಲಾಡಿಸಿದರು. ಕಾಯಕ ಪ್ರತಿಯೊಬ್ಬರಿಗೂ ಕಡ್ಡಾಯವಾಗಿರಬೇಕೆಂದರು. ಕಾಯಕದಿಂದ ಬಂದ ಫಲ ಅದು ಸ್ವಾರ್ಥಕ್ಕೆ ಬಳಸಲ್ಪಡದೆ ಸಮಾಜಕ್ಕೆ ಸಮರ್ಪಿಸುವ ಮನೋಬಲವನ್ನು ಹೆಚ್ಚಿಸಿದರು. ಅದಕ್ಕಾಗಿ ದಾಸೋಹ ತತ್ವವನ್ನು ರೂಢಿಗೊಳಿಸಿದರು. ಪ್ರಾಮಾಣಿಕ ಗಳಿಕೆಯೊಂದಿಗೆ ಗಳಿಸಿದುದರ ಸೂಕ್ತರೀತಿಯ ಬಳಕೆಯಿಂದಾಗಿ ಎಲ್ಲರೂ ಸರಿಸಮಾನರೆನಿಸಿದರು. ಪ್ರತಿಯೊಬ್ಬರಿಗೂ ಇಷ್ಟಲಿಂಗಧಾರಣೆ ಕಡ್ಡಾಯವಾಯಿತು. ಆತ್ಮೋದ್ಧಾರದ ಜೊತೆಗೆ ಸಮಾಜದ ಸರ್ವಾಂಗೀಣ ಪ್ರಗತಿ ಸಾಧಿಸಿದರು. ಪುರುಷರಂತೆ ಸ್ತ್ರೀಯರಿಗೂ ಸರಿಸಮಾನ ಸ್ಥಾನ ದೊರೆಯಿತು. ಇದರಿಂದಾಗಿ ಸ್ತ್ರೀಯರೂ ವಚನಕಾರ್ತಿಯ

ರಾದರು. ಶಿವಯೋಗ ಸಾಧನೆಯಲ್ಲಿ ಮುಂದುವರಿದು ಲಿಂಗಾಂಗ ಸಾಮರಸ್ಯ ಸಿದ್ಧಿ ಪಡೆದುಕೊಂಡರು. ತಮ್ಮ ತಮ್ಮ ಪತಿದೇವರು ಕೈಕೊಳ್ಳುವ ಕಾಯಕದಲ್ಲಿ, ದಾಸೋಹದಲ್ಲಿ ಬಹುನಿಷ್ಠೆಯಿಂದ ಸೇವೆ ಸಲ್ಲಿಸತೊಡಗಿದರು.

ಬಸವಣ್ಣನವರ ಪೂರ್ವ ಕಾಲದಲ್ಲಿ ಜನಜೀವನ ಅಸ್ತವ್ಯಸ್ತಗೊಂಡಿತ್ತು. ಧಾರ್ಮಿಕ ಅಶಾಂತಿ, ನೈತಿಕ ಅಧಃಪತನ, ಆರ್ಥಿಕ ಅಸ್ಥಿರತೆಯಿಂದ ಸಮಾಜ ಛಿದ್ರ ಛಿದ್ರವಾಗಿತ್ತು. ವ್ಯಕ್ತಿ ಮತ್ತು ಸಮಾಜ ಅಧೋಗತಿಗಿಳಿದ್ದವು. ಧರ್ಮ ತನ್ನ ಸಹಜ ಸತ್ವವನ್ನು ಕಳೆದುಕೊಂಡಿತ್ತು. ಅದೂ ಕೆಲವೇ ಜನ ಸ್ವಾರ್ಥಿಗಳ ಸ್ವತ್ತಾಗಿತ್ತು. ಯಜ್ಞ-ಯಾಗಾದಿಗಳ ನೆವದಲ್ಲಿ ಹಿಂದೆ ತಾಂಡವ ವಾಡುತ್ತಿತ್ತು. ಇಂಥ ವಿಷಮ ಪರಿಸ್ಥಿತಿಯಲ್ಲಿ ಉದಯಿಸಿದ ಬಸವಣ್ಣನವರ ಕ್ರಾಂತಿಕಾರಕ ವಿಚಾರಗಳಿಂದ, ಅಲ್ಲಮ ಪ್ರಭುದೇವರ ಮಾರ್ಗದರ್ಶನದಲ್ಲಿ ವೀರಶೈವ ಧರ್ಮ, ಸಮಾಜ ಉದಾತ್ತೀಕರಣಗೊಂಡಿತು. ದಯವೇ ಧರ್ಮದ ಮೂಲವೆಂದು ಸಾರಿ ಸತ್ಯವ ನುಡಿವುದೇ ಸ್ವರ್ಗಲೋಕವೆಂದರು. ಮಿಥ್ಯವ ನುಡಿವುದೇ ಮರ್ತ್ಯಲೋಕವೆಂದರು. ಆಚಾರವೇ ಸ್ವರ್ಗ, ಅನಾಚಾರವೇ ನರಕವೆಂದರು, ಸತ್ಪಥದಲ್ಲಿ ನಡೆಯ ಹಚ್ಚಿದರು. ಸ್ತ್ರೀಯರಿಗೆ ಪುರುಷರಂತೆಯೆ ಸರಿಸಮಾನ ಸ್ಥಾನ ನೀಡಿದುದರಿಂದ ಶಿವಶರಣರಂತೆ ಶರಣೆಯರೂ ಉದಾತ್ತ ವ್ಯಕ್ತಿತ್ವ ರೂಪಿಸಿಕೊಂಡರು. ಇದರಿಂದ ಸರ್ವಾಂಗ ಸುಂದರ ಹೊಸ ಸಮಾಜ ರಚನೆಯಾಯಿತು. ಮೂಢನಂಬಿಕೆಗಳು ಮಾಯವಾದವು. ಜ್ಞಾನೋದಯವಾಯಿತು. ಸಮಾಜ ಪ್ರಗತಿಶೀಲವಾಯಿತು.


ಅಕ್ಕಮಹಾದೇವಿ

*'ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ*
*ಮತ್ತೊಂದಕ್ಕೆರಗಿದೆಡೆ ಕಿವಿಮೂಗ ಕೊಯ್ವನು*
*ಹಲವು ದೈವದ ಎಂಜಲ ತಿಂಬುವವರೇನೆಂಬೆ*
*ಕೂಡಲಸಂಗಮದೇವಾ'*

ಎಂದು ಬಸವಣ್ಣನವರು ಸ್ತ್ರೀ ಪುರುಷ ಯಾರೇ ಇರಲಿ, ಅವರೆಲ್ಲರಿಗೂ ದೇವರು ಒಬ್ಬನೇ, ಪತಿವ್ರತಾ ಸ್ತ್ರೀಗೆ ಒಬ್ಬನೇ ಗಂಡನಿದ್ದಂತೆ ಎಂಬ ದೃಷ್ಟಾಂತದ ಮೂಲಕ ಭಕ್ತರ ಶ್ರದ್ಧೆಯನ್ನು ಗಟ್ಟಿಗೊಳಿಸಿ ನಿಷ್ಠೆಯತ್ತ ತಿರುಗಿಸಿ ಅವಧಾನ, ಅನುಭವ, ಆನಂದಗಳ ಮೂಲಕ ಸಮರಸದೆಡೆಗೆ ಒಯ್ದರು. ಹೀಗೆ ದೈವೀ ಭಾವನೆ ಗಟ್ಟಿಗೊಂಡು ಆತ್ಮಬಲ ಬೆಳೆಯಿಸಿಕೊಂಡು ನೀತಿಯ ಭದ್ರವಾದ ನೆಲಗಟ್ಟಿನ ಮೇಲೆ ಸ್ತ್ರೀ-ಪುರಷರೆಲ್ಲರೂ ಒಂದಾಗಿ ಲೌಕಿಕ ಮತ್ತು ಪಾರಮಾರ್ಥಿಕ ಸುಖ-ಸಂಪತ್ತನ್ನು ಗಳಿಸಿಕೊಂಡು ಅಂತರಂಗ-ಬಹಿರಂಗ ಶುದ್ಧಿ ಪಡೆದರು. ಶಿವಶರಣರಂತೆ ಶಿವಶರಣೆಯರೂ ಶಿವಯೋಗ ಸಂಪನ್ನೆಯರಾದರು. ಅಂಗದ ಮೇಲೆ ಇಷ್ಟಲಿಂಗ ಧರಿಸಿ, ಲಿಂಗಾಂಗ ಸಾಮರಸ್ಯ ಪಡೆಯುವ ಸ್ತ್ರೀಯರ ಈ ಸಾಧನೆ ಜಾಗತಿಕ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಾಗಿದೆ. ಅಂತೆಯೇ ಮಹಾದೇವಿಯಕ್ಕ 'ಹೆಸರಿನಲಿ ಹೆಣ್ಣು ರೂಪವಾದರೂ ಭಾವದಲ್ಲಿ ಗಂಡು ರೂಪಾಗಿ' ಮಿಂಚಿದ ಮಹಿಳಾಮಣಿ ಎನಿಸಿದಳು. ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆ, ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಿಯಮ್ಮ, ಲಿಂಗಮ್ಮ ಮೊದಲಾದ ಶರಣೆಯರ ಮುಖಂಡತ್ವದಲ್ಲಿ ವೀರಶೈವ ಸಮಾಜದವರಿಗೆ ನೀತಿ ನಿಯಮಗಳ ಪಾಲನೆ ಮಾಡುವಂತೆ ಪಾಠ ಹೇಳಿಕೊಡ ತೊಡಗಿದರು. ಪೂಜೆ, ಧ್ಯಾನ, ಕಾಯಕ, ದಾಸೋಹ ತತ್ವಗಳ ಆಚರಣೆಯ ಮಹತ್ವವನ್ನು ತಿಳಿಸಿಕೊಟ್ಟರು. ಮೂಢನಂಬಿಕೆಗಳನ್ನು ಬಿಡಲು ತಿಳಿವಳಿಕೆ ನೀಡಿದರು. ಇದರಿಂದ ಸ್ತ್ರೀ ಸಮಾಜದಲ್ಲಿ ಕ್ರಾಂತಿಯೇ ಆಯಿತು.

ಬಸವಣ್ಣನವರು ಸಾಮಾನ್ಯ ಮಾನವರಂತೆಯೇ ಜನಿಸಿದವರು. ತಮ್ಮ ಮಹತ್ತರ ಸಾಧನೆಯಿಂದ ಮಹಾನುಭಾವ ರಾದರು. ಮಹೋನ್ನತಿಯನ್ನು ಸಾಧಿಸಿದರು. ತಮ್ಮ ಅಲ್ಪ ಅವಧಿಯ ಜೀವಮಾನದಲ್ಲಿ ಮಾನವ ಲೋಕಕ್ಕೆ ಅದ್ಭುತ ಕಾಣಿಕೆ ನೀಡಿದರು. ಭಕ್ತಿಭಂಡಾರಿ, ಯುಗ ಪ್ರವರ್ತಕ, ಸಮಾಜ ಸುಧಾರಕ, ವಿಶ್ವಬಂಧು, ವಿಭೂತಿಪುರುಷ, ಜಗಜ್ಯೋತಿಯಾಗಿ ಕಂಗೊಳಿಸಿದರು. ತಮ್ಮ ಕ್ರಾಂತಿಕಾರಿ ವ್ಯಕ್ತಿತ್ವದಿಂದ ಧಾರ್ಮಿಕ- ಸಾಮಾಜಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಅದ್ಭುತ ಬದಲಾವಣೆಯನ್ನುಂಟುಮಾಡಿದರು. ಸಮಾಜದ ಸರ್ವತೋಮುಖ ದೇಳ್ಗೆಯಾಯಿತು.

*''ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು*
*ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು*
*ತೊಳಗಿ ಬೆಳಗುತ್ತಿದ್ದಿತ್ತಯ್ಯಾ ಶಿವನ ಪ್ರಕಾಶ*
*ಆ ಬೆಳಗಿನೊಳಗೆ ಒಪ್ಪುತ್ತಿದ್ದರಯ್ಯಾ ಅಸಂಖ್ಯಾತರು.*
*ಹುಸಿಯೆ, ಭಕ್ತನಿದ್ದ ಕ್ಷೇತ್ರ ಅವಿಮುಕ್ತಿ ಕ್ಷೇತ್ರ ಎಂಬುದು?*
*ಹುಸಿಯೆ, ಶಿವಭಕ್ತನಿದ್ದ ದೇಶ ಪಾವನವೆಂಬುದು ಗುಹೇಶ್ವರಲಿಂಗದಲಿ''*





ಎಂದು ಪ್ರಭುದೇವರು ಕಲ್ಯಾಣದ ಮಹತ್ವವನ್ನು ಸಿದ್ಧರಾಮನಲ್ಲಿ ಕೊಂಡಾಡುತ್ತಿರುವ ವಚನದಂತೆ – ಬಸವ ಪ್ರಕಾಶದಲ್ಲಿ ಅಸಂಖ್ಯಾತ ಶಿವಶರಣ-ಶರಣೆಯರೂ ಆತ್ಮಜ್ಯೋತಿಯಾಗಿ ತೊಳಗಿ ಬೆಳಗುತ್ತಿದ್ದರು.

ಶಿವಶರಣರಂತೆ-ಶಿವಶರಣೆಯರಿಗೂ ಧಾರ್ಮಿಕ ಸ್ವಾತಂತ್ರ್ಯ ದೊರೆತ ಪರಿಣಾಮವಾಗಿ ಅವರು ಕೈಕೊಳ್ಳುವ ಸಮಾಜ ಕಾರ್ಯಗಳಿಗೆ ನೀತಿಯ ನೆಲೆಗಟ್ಟಾಗಿ ಅವುಗಳಿಗೆ ಹೆಚ್ಚಿನ ಬಲ ಬಂದಿತು.

ಶರಣ ಕಾಯಕ-ದಾಸೋಹ ತತ್ವಗಳು ಸಾರ್ವಜನಿಕವಾದಂಥವುಗಳು. ಇಷ್ಟಲಿಂಗ ಪೂಜೆ ವ್ಯಷ್ಟಿ ಸಾಧನೆಯಾದರೆ, ಈ ಕಾಯಕ-ದಾಸೋಹಗಳು ಸಮಷ್ಠಿ ಪ್ರಜ್ಞೆಯವು. ಪೂಜೆ ವೈಯಕ್ತಿಕ ಫಲ ನೀಡಿದರೆ, ಅದರ ಫಲ ಮತ್ತು ಕಾಯಕ ದಾಸೋಹಗಳ ಫಲವೂ ಸಾರ್ವತ್ರಿಕವಾದವುಗಳಾಗಿವೆ ಮತ್ತು ಸಾರ್ವತ್ರಿಕ ಕಲ್ಯಾಣ ಬಯಸುವಂತಹವು. ಅಂತೆಯೆ ಶರಣೆಯರೂ ತಮ್ಮ ತಮ್ಮ ಪುರುಷರ ಕಾಯಕ-ದಾಸೋಹ ಕಾರ್ಯದಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡಿಬಿಡುತ್ತಿದ್ದರು. ತಮ್ಮ ತನು ಮನ ಧನಗಳನ್ನು ಗುರು-ಲಿಂಗ-ಜಂಗಮಕ್ಕೆ ಸಮರ್ಪಿಸುವ ಉದಾತ್ತ ಸಮರ್ಪಣ ಭಾವವನ್ನು ಮೆರೆದರು. ಕಾಯಕ, ದಾಸೋಹ ತತ್ವಗಳ ನುಡಿ ಅರಿತು, ನಡೆಯಲ್ಲಿ ತಪ್ಪಿದಾಗ ಅಂಥ ಗಂಡಂದಿರಿಗೆ ಶರಣೆಯರು ಎಚ್ಚರಿಕೆಯ ಘಂಟೆ ಬಾರಿಸಿ ಬುದ್ಧಿವಾದ ಹೇಳಿದ ಘಟನೆಗಳೂ ಸಾಕಷ್ಟಿರುತ್ತವೆ.


ಅಕ್ಕನಾಗಲಾಂಬಿಕೆ

ವೀರಶೈವ ಧರ್ಮಾನುಯಾಯಿಗಳಿಗೆ ಇಷ್ಟಲಿಂಗಧಾರಣೆ ಕಡ್ಡಾಯ. ಅದಿಲ್ಲದವರೊಡನೆ ವ್ಯವಹಾರವಿಲ್ಲ. ಅದಿಲ್ಲದವರನ್ನು ಭವಿಗಳೆಂದೂ ಕರೆದಿದ್ದಾರೆ. ಮಹಾಶಿವಶರಣೆ ಮಹಾದೇವಿಯಕ್ಕನ ರೂಪಲಾವಣ್ಯಕ್ಕೆ ಮನಸೋತ ಕೌಶಿಕರಾಜ ಲಗ್ನವಾಗಲು ಬಯಸಿದಾಗ, ಮಹಾದೇವಿಯಕ್ಕ ಭಕ್ತನಾದರೆ ಮಾತ್ರ ಎಂದು ಕರಾರು ಒಡ್ಡುತ್ತಾಳೆ. ಮೊದಲು ಒಪ್ಪಿ ಆಮೇಲೆ ಹಾಗೆ ನಡೆದುಕೊಳ್ಳದಾದಾಗ ಅವನನ್ನು ತಿರಸ್ಕರಿಸಿ ದಿಗಂಬರೆಯಾಗಿ, ಚೆಲುವ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿ – ಎಂದು ನೆರೆನಂಬಿದ ಘಟನೆ ಮೈನವಿರೇರಿಸುವಂತಹದಾಗಿದೆ.

ಆಯ್ದಕ್ಕಿ ಮಾರಯ್ಯನು ಅಕ್ಕಿಯಾಸೆಗೆ ಬಲಿಬಿದ್ದು ತಂದು ಸುರುವಿದಾಗ ಸತಿ ಲಕ್ಕಮ್ಮ ಸಿಡಿಮಿಡಿಗೊಂಡು, ''ಈ ಸಕ್ಕಿಯ ಆಸೆ ನಿಮಗೇಕೆ? ತಂದಿಕ್ಕುವ ಶಿವಂಗೆ ಬಡತನವೇ'' ಎಂದು ಕೇಳಿ, ಆ ಅಕ್ಕಿಯನ್ನು ಹಿಂದಕ್ಕೆ ಕಳಿಸಿಕೊಟ್ಟ ಘಟನೆ ಇಂದಿನ ಭ್ರಷ್ಟಾಚಾರ ನಿರ್ಮೂಲನೆಗೆ ಮಾರ್ಗದರ್ಶನವಾಗಿದೆ.

'ಹಲವಾರು ವರುಷ ಕಾಯಕ ಮಾಡಿ, ದಾಸೋಹ ನೀಡಿಯಾಗಿದೆ. ಇನ್ನು ಕೈಲಾಸಕ್ಕೆ ಹೋಗುವೆ, ಎಂದು ಆಯ್ದಕ್ಕಿ ಮಾರಯ್ಯ ಸತಿ ಲಕ್ಕಮ್ಮನಿಗೆ ಹೇಳಿದಾಗ, ಲಕ್ಕಮ್ಮ ಧೀರಳಾಗಿ, ದಿಟ್ಟತನದಿಂದ ಅಡ್ಡದಾರಿಗಿಳಿಯುವ ಗಂಡನಿಗೆ ಬುದ್ಧಿವಾದ ಹೇಳಿದ್ದಾಳೆ :

*'ಮಾಡಿ ನೀಡಿ ಹೋಹೆನೆಂಬಾಗ ಕೈಲಾಸವೇನು ಕೈಕೂಲಿಯೆ?*
*ಹಿಂದೊಂದು ಭಾವಿಸದೆ, ಮುಂದೊಂದು ಕಲ್ಪಿಸದೆ*
*ಸಲೆ ಸಂದಿದ್ದಾಗಲೆ ಮಾರಯ್ಯಪ್ರಿಯ –*
*ಅಮಲೇಶ್ವರ ಲಿಂಗವಿದ್ದುದೇ ಕೈಲಾಸ,*

ಇದರಂತೆ ಬಸವಣ್ಣನವರು ನೀಲಾಂಬಿಕೆಗೆ ಕೂಡಲ ಸಂಗಮಕ್ಕೆ ಬರಲು ಹೇಳಿ ಕಳುಹಿಸಿದಾಗ –

*'ನೋಡು ನೋಡು ಲಿಂಗವೇ?*
*ಬಸವಯ್ಯನವರು ಮಾಡಿದಾಟವ?*
*ಅಲ್ಲಿದ್ದ ಸಂಗಯ್ಯ ಇಲ್ಲಿಲ್ಲವೆ?*
*ಇಲ್ಲಿದ್ದ ಸಂಗಯ್ಯ ಅಲ್ಲಿಲ್ಲವೆ?*
*ಐಲ್ಲ ಮಹಾತ್ಮರಿಗಿದು ಗುಣವೆ?'*

ಎಂದು ಹಾಡಿ ಬಸವಣ್ಣನವರಿಗೆ ಬುದ್ಧಿವಾದ ಹೇಳಿದ್ದನ್ನು ಅರಿತುಕೊಳ್ಳಬಹುದಾಗಿದೆ. ಶರಣೆಯರ ಇಂಥ ಬುದ್ಧಿ ವಾದಗಳು ಅಹಂಕಾರದಿಂದ ಕೂಡಿದವುಗಳಲ್ಲ, ಅವು ಕಾಂತಾಸಮ್ಮಿತ ಉಪದೇಶಗಳಾಗಿರುತ್ತವೆ. ಹೀಗೆ ಆಯ್ದಕ್ಕಿ ಲಕ್ಕಮ್ಮ, ಮಹಾದೇವಿಯಕ್ಕ, ನೀಲಾಂಬಿಕೆ, ಮೋಳಿಗೆ ಮಹಾದೇವಿಯಮ್ಮ, ಲಿಂಗಮ್ಮ ಮೊದಲಾದ ಶರಣೆಯರು ಸತಿ-ಪತಿಭಾವ ಮೆರೆದು ಮಹಿಳೆಯರ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಸತಿಪತಿಗಳೊಂದಾದ ಭಕ್ತಿ ಶಿವನಿಗೆ ಹಿತವನ್ನುಂಟು ಮಾಡಿದೆ. ಅಂತೆಯೆ ಪ್ರಪಂಚದಲ್ಲಿದ್ದು ಪಾರಮಾರ್ಥ ಗೆದ್ದ ಶರಣೆಯರ ಜೀವನ ಆದರ್ಶವಷ್ಟೇ ಅಲ್ಲ, ಅನುಕರಣೀಯವೂ ಆಗಿದೆ.

ಮಹಾದೇವಿಯಕ್ಕ, ಮುಕ್ತಾಯಕ್ಕ ಮೊದಲಾದ ಶರಣೆಯರು-ಮಹಾಜ್ಞಾನಿಗಳು. ಅವರ ಅನುಭಾವದ ಸುಂದರವೂ, ಪ್ರತಿಭಾಸಂಪನ್ನವೂ ಆದ ನುಡಿಮಂತ್ರಗಳಿಂದ ವಚನ ಸಾಹಿತ್ಯದ ಶ್ರೀಮಂತಿಕೆ ಹೆಚ್ಚಿದೆ. ದೇವರೇ ಪತಿ ಎಂದು



ನೀಲಾಂಬಿಕೆ

ನಂಬಿ, ಆಧ್ಯಾತ್ಮದ ಕೊನೆಯ ಹಂತವನ್ನು ಕಂಡುಂಡ ಇಂಥ ಮಹಿಳಾಮಣಿಯರ ಜೀವನ ಆದರ್ಶಪೂರ್ಣವಾಗಿದೆ.

ಸಮಾಜದಲ್ಲಿ ನೈತಿಕ ನಿಯಮಗಳ ಪಾಠವನ್ನು ವ್ಯಕ್ತಿ ಮೊದಲು ತಾಯಿಯ ಮಡಿಲಿನಲ್ಲಿ ಕಲಿಯುತ್ತಾನೆ. ನಂತರ ನೆರೆಹೊರೆಯವರಿಂದ, ಸಮಾಜದಿಂದ ಕಲಿಯುವು ದುಂಟು. ಅದಕ್ಕಾಗಿ ಚಿಕ್ಕಂದಿನಲ್ಲಿ ತಾಯಿಯ ಮಡಿಲಿನಲ್ಲಿ ಕಲಿಯುವ ಪಾಠ ಹೆಚ್ಚು ಪರಿಣಾಮ ಕಾರಿಯಾಗಿರುವುದರಿಂದ ತಾಯಿಯಾದವಳು ಸಮಾಜದ ಅಜ್ಞ ಮಕ್ಕಳಿಗೆ ನಡೆಯ ಕಲಿಸುವಳು. ನೀತಿಯ ಪಾಠವನ್ನು ಸ್ತ್ರೀಯರು ಸಮಾಜಕ್ಕೆ ತಿಳಿಹೇಳಲೆಂದೇ ಅವಳಿಗೆ ಪುರುಷರಷ್ಟೇ ಸ್ಥಾನಮಾನ ನೀಡಿದ್ದು. ಹನ್ನೆರಡನೇ ಶತಮಾನದ ಶರಣ ಸಮಾಜ ಅಷ್ಟು ಉನ್ನತ ಮಟ್ಟಕ್ಕೇರಲು ಕಾರಣ ಈ ಸ್ತ್ರೀ ಸ್ವಾತಂತ್ರ್ಯ ಎಂಬುದೆಂದೇ ಹೇಳಬಹುದು. ಅದಕ್ಕೆಂದೇ ನೀತಿಯ ಮನೋಬಲ ಪ್ರತಿಯೊಬ್ಬರಲ್ಲೂ ಬೆಳೆದು ಬರಬೇಕು. ನೈತಿಕ ಬಲದಿಂದ ಸಮಾಜದಲ್ಲಿ ಐಕ್ಯತೆ, ಶಾಂತಿ, ವಾತ್ಸಲ್ಯ ಉಳಿಯುತ್ತದೆ. ನೈತಿಕ ನಿಯಮಗಳು ಅದರಿಂದಾಗಿ ಸಮಾಜದ ವ್ಯಕ್ತಿ-ವ್ಯಕ್ತಿಗಳಲ್ಲಿ ರಕ್ತಗತವಾಗಿಯೂ ಹರಿದು ಬರುತ್ತವೆ. ಅಂಥ ಮಹಾಕಾರ್ಯ ವನ್ನು ಅಂದು ಶರಣೆಯರು ಮಾಡಿದ್ದರಿಂದಲೇ ಆ ಸಮಾಜ ಉದಾತ್ತೀಕರಣ ಹೊಂದಿತು.

ಆಯ್ದಕ್ಕಿ ಲಕ್ಕಮ್ಮ

ಶಿವಶರಣೆಯರು ಶರಣರಂತೆ ಇಷ್ಟಲಿಂಗಧಾರಿಗಳಾಗಿದ್ದರು. ಅಷ್ಟಾವರಣಗಳಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರಗಳು ವೀರಶೈವ ಮತಾನುಯಾಯಿಗಳಿಗೆ ಧಾರ್ಮಿಕ ರಕ್ಷಾಕವಚಗಳಾಗಿವೆ. ಇವು ಅವರ ಧಾರ್ಮಿಕ ಪ್ರಗತಿಗೂ ಸಹಕಾರಿಯಾಗಿದೆ. ಸಾಮಾಜಿಕ ಸಂಘಟನೆಗೆ ನೆರವಾಗಿವೆ. ಲಿಂಗಧಾರಿಗಳಾದವರೆಲ್ಲರೂ ಒಂದೆಂಬ ಮನೋಭಾವ ಬೆಳೆದಲ್ಲಿ ಅವರ ಸಂಘಟನೆಗೆ ಬಲ ಬಂದಂತಾಗುತ್ತದೆ.

ಪಂಚಾಚಾರಗಳಾದ ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ, ಗಣಾಚಾರಗಳಲ್ಲಿ ಮೊದಲಿನ ನಾಲ್ಕು ಆಚಾರಗಳು ನೀತಿ-ನಿಯಮಗಳಿಗೆ ಸಂಬಂಧಪಟ್ಟದ್ದು, ಶಿವಮಯವಾದ ಈ ಲೋಕದ ಸೇವೆಯಲ್ಲಿ ತನ್ನನ್ನು ಹೇಗೆ ತೊಡಗಿಸಿಕೊಳ್ಳಬೇಕು ಎಂಬುದನ್ನು ತಿಳಿಯುವಂತಾಗುತ್ತದೆ. ಗಣಾಚಾರ ಸಾಮಾಜಿಕ ಸಂಘಟನೆಗೆ ಮೀಸಲಾಗಿದೆ. ಅಷ್ಟಾವರಣಗಳು ವೀರಶೈವಮತಾನುಯಾಯಿಗಳಿಗೆ ಅಂಗವಿದ್ದಂತೆ, ಪಂಚಾಚಾರಗಳು ಪ್ರಾಣವಿದ್ದಂತೆ, ಷಟ್‌ಸ್ಥಲ ಆತ್ಮವಿದ್ದ ಹಾಗೆ.

ಷಟ್‌ಸ್ಥಲದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಸ್ಥಲಗಳ ಅರಿವು ಮೂಡಿಸಿಕೊಂಡು ಆತ್ಮಬಲ ಬೆಳೆಸಿಕೊಳ್ಳಬೇಕಾಗಿದೆ. ಧರ್ಮದ ಅರಿವು ಇಲ್ಲದ್ದಕ್ಕೆ ನೀತಿಯ ನೆಲಗಟ್ಟೇ ಇಲ್ಲದಂತಾಗಿದೆ. ಯದ್ವಾ-ತದ್ವಾ ಜೀವನ ಸಾಗುತ್ತ ನಡೆದಿರುತ್ತದೆ. ಹಾಗಾಗ ಬಾರದೆಂದೇ ಗುರು ವಿರಕ್ತ ಮಠಗಳು ಸ್ಥಾಪನೆ ಗೊಂಡಿರುತ್ತವೆ. ಮಠದ ಗುರು- ವಿರಕ್ತ ಸ್ವಾಮಿಗಳು ತಮ್ಮ-ತಮ್ಮ ಮೂಲ ಕರ್ತವ್ಯಗಳನ್ನು ಮರೆತಂತೆ ಕಾಣಿಸುತ್ತದೆ. ಅದಕ್ಕೆ ಅವರೇ ಕಾರಣರೆಂದೇನೂ ಅಲ್ಲ. ಭಕ್ತರೂ ಕೂಡ, ತಮ್ಮ ತಮ್ಮ ಪಾಲಿನ ಕರ್ತವ್ಯವನ್ನು ಮಾಡುತ್ತಾ ನಡೆದಲ್ಲಿ ಯಾವುದೇ ಸಮಾಜದ ಭವಿಷ್ಯ ಉಜ್ವಲವೆಂದೇ ಹೇಳಬೇಕಾಗುತ್ತದೆ.

ವೀರಶೈವರು ಎಂದಿಗಿಂತಲೂ ಇಂದು ಹೆಚ್ಚು ಸಂಘಟಿತರಾಗಬೇಕಿದೆ. ರಾಜಕಾರಣಿಗಳ ಹೊಂಚಿನಿಂದಾಗಿ ಒಮ್ಮೊಮ್ಮೆ ನಮ್ಮತನವನ್ನು ಮರೆಯುತ್ತಿದ್ದೇವೆ. ಕಾಯಕವೇ ಕೈಲಾಸವೆಂದಂತೆ ಶ್ರಮಕ್ಕೆ ಗೌರವ ದೊರಕಬೇಕು. ಇಂದಿನ ಯುಗ ವೈಚಾರಿಕ ಯುಗ. ಮೇಲಾಗಿ ವೈಜ್ಞಾನಿಕ ಯುಗವಾಗಿದೆ. ಸಾಮಾಜಿಕ ಪರಿವರ್ತನೆ ಮತ್ತು ಸಂಘಟನೆಗೆ ಶರಣೆಯರೂ ಕಾರ್ಯತತ್ಪರರಾಗಬೇಕು. ಶರಣ-ಶರಣೆಯರ ವಚನಗಳು ಜೀವನ ರಥದ ಚಕ್ರಗಳಿಗೆ ಕಡೆಗೀಲುಗಳಾಗಬೇಕು. ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ – ಇಂದು ಸಮಾಜದ ಸಂಘಟನೆ ನಡೆಯುವುದು ತೀರ ಅವಶ್ಯವಿದೆ. ಸಮಾಜದ ಬಾಂಧವರೆಲ್ಲರೂ ಈ ಕಡೆಗೆ ಲಕ್ಷ್ಯವಹಿಸಬೇಕಾಗಿದೆ.









## ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ವ್ಯಾಸ ಬೋಯಿತಿಯ ಮಗ!*
*ಮಾರ್ಕಂಡೇಯ ಮಾತಂಗಿಯ ಮಗ!*
*ಮಂಡೋದರಿ ಕಪ್ಪೆಯ ಮಗಳು!*
*ಕುಲವನರಸದಿರಿ ಭೋ!*
*ಕುಲದಿಂದ ಮುನ್ನೇನಾದಿರಿ ಭೋ:*
*ಸಾಕ್ಷಾದಗಸ್ತ್ಯ ಕಬ್ಬಿಲ, ದುರ್ವಾಸ ಮಚ್ಚಿಗ,*
*ಕಶ್ಯಪ ಕಮ್ಮಾರ, ಕೌಂಡಿನ್ಯನೆಂಬ ಋಷಿ*
*ಮೂರು ಲೋಕವರಿಯೆ ನಾವಿಂದ ಕಾಣ ಭೋ*
*ನಮ್ಮ ಕೂಡಲಸಂಗನ ವಚನವಿಂತೆಂದುದು:*
*''ಶ್ವಪಚೋಪಿಯಾದರೇನು ಶಿವಭಕ್ತನೇ ಕುಲಜಂ ಭೋ!''*

ವೇದಕಾಲಕ್ಕೆ ಹಿಂದೂಧರ್ಮದಲ್ಲಿ ಕಾಯಕದ ಆಧಾರದ ಮೇಲಿಂದ ವರ್ಣವ್ಯವಸ್ಥೆಯಿದ್ದಿತಾದರೂ, ಒಂದು ವರ್ಣ (=ಜಾತಿ) ಮತ್ತೊಂದಕ್ಕಿಂತ ಕೀಲೆಂದಾಗಲಿ ಮೇಲೆಂದಾಗಲಿ ಅತೀವ ಘರ್ಷಣೆಯಿರಲಿಲ್ಲ. ಆದರೆ ಅಲ್ಲಿಂದೀಚೆಗೆ ಅವನತಿಯ ಕಾಲಕ್ಕೆ ಪ್ರಥಮ ವರ್ಣವೇ ಉತ್ತಮ, ಚತುರ್ಥವರ್ಣ ಅಧಮ, ಪಂಚಮ (+ವರ್ಣ) ಅಸ್ಪೃಶ್ಯ ಎಂದು ಸಮಾಜ ಛಿನ್ನಭಿನ್ನವಾಗಿ ವ್ಯಾಕುಲಕ್ಕೊಳಗಾಯಿತು. ಉತ್ತಮ ಕುಲದವರಿಂದಲೇ ಲೋಕೋದ್ಧಾರವೆಂಬ ಮಿಥ್ಯಾಕಲ್ಪನೆ ಹಬ್ಬಿತು. ಈ ಮುಸುಕಿನಲ್ಲಿ ಉತ್ತಮ ಕುಲದವರು ಉಂಡುಟ್ಟು ಸ್ವಾರ್ಥದಲ್ಲಿ ವಿಜೃಂಭಿಸಿದರು. ಗರ್ಹಿತರಾದ ದಲಿತವರ್ಗದವರು ತಾವು ನಿರ್ಭಾಗ್ಯರೆಂದೂ, ನಿಶ್ಶಕ್ತರೆಂದೂ, ತಮ್ಮಿಂದೇನೂ ಊರ್ಜಿತವಾಗಲಾರದೆಂದು ಎದೆಗೆಟ್ಟು ಕಂಗೆಟ್ಟು ಮೂಲೆಗುಂಪಾದರು. ಹೀಗೆ ಸಮಾಜದ ಉದ್ಧಾರ ಸ್ಥಗಿತವಾಯಿತು. ಆ ವಿಷಮ ವೇಳೆಯಲ್ಲಿ ಶೀಲದಿಂದಲ್ಲದೆ, ಕುಲದಿಂದ ಮಾತ್ರ ಹಿರಿಯರೆನಿಸಿಕೊಂಡವರನ್ನು ಮೂದಲಿಸಿ ಜನತೆಯ ತಿರುಳಿನಂತಹ ದಲಿತವರ್ಗವನ್ನು ಹುರಿದುಂಬಿಸುತ್ತಿರುವರು ಬಸವಣ್ಣನವರು ಈ ವಚನದ ಮೂಲಕ.

ಪುರಾಣ-ಇತಿಹಾಸ-ವೇದಾಂತಸೂತ್ರಗಳ ಪ್ರಥಮಪ್ರವರ್ತಕನಾದ ವ್ಯಾಸ, ಮೃತ್ಯುವನ್ನು ಪರಾಭವಗೊಳಿಸಿ ಅಮೃತಪುತ್ರನಾದ ಮಾರ್ಕಂಡೇಯ, ಪತಿವ್ರತಾ ಶಿರೋಮಣಿಯಾದ ಮಂಡೋದರೆ, ಸಾಹಸಿಯಾದ ಅಗಸ್ತ್ಯ, ದಕ್ಷನಾದ ದುರ್ವಾಸ, ಸಂಪನ್ನನಾದ ಕಶ್ಯಪ, ದಕ್ಷನಾದ ಕೌಂಡಿನ್ಯ – ಇವರಾರು ಉತ್ತಮ ಕುಲದಲ್ಲಿ ಹುಟ್ಟಿದವರಲ್ಲ! ಬೋವಿ, ಬೇಡ-ಚಮ್ಮಾರ- ಕಮ್ಮಾರ ಮುಂತಾದ ಕೀಳೆಂದು ಪರಿಗಣಿಸಲಾದ ಕುಲಗಳಲ್ಲಿ ಹುಟ್ಟಿದವರು!! ಆದರೂ ಅವರು ತಮ್ಮ ಶಿವಭಕ್ತಿಶೀಲದಿಂದ ಸರ್ವರಿಂದಲೂ ಸನ್ಮಾನಿತರಾದರು. ಅವರಿಗೆ ಗೌರವಪೂಜ್ಯತೆಗಳು ಸಂದುದು ವಿಚಾರಕ್ಕೆ ತತ್ತರಿಸುವ ಕುಲ-ಜಾತಿಭ್ರಮೆಯಿಂದಲ್ಲ, ವಿಚಾರದಿಂದ ಮತ್ತಷ್ಟು ರೂಢಮೂಲವಾಗುವ ಸದಾಚರಣೆಗಳಿಂದ. ಆದುದರಿಂದಲೇ – ಬಸವಣ್ಣನವರು ''ಕುಲವನರಸದಿರಿ ಭೋ'' ಎಂದು ಘೋಷಿಸಿ, ಉತ್ತಮ ಕುಲದಲ್ಲಿ ಹುಟ್ಟಿದ ಮಾತ್ರಕ್ಕೇ ಯಾರೂ ಯಾವ ಮಹಾತ್ಕಾರ್ಯವನ್ನೂ ಸಾಧಿಸಿಲ್ಲವೆಂದು ಎಚ್ಚರಿಸಿದರು. ಯಾವನಾದರೊಬ್ಬನು ಹುಟ್ಟಿನಿಂದ ಶ್ವಪಚನಾದರೆ ತಾನೇ ಏನು? ಅವನನ್ನು ಕುಲಜನನ್ನಾಗಿ ಮಾಡುವ ಮಹದಂಶವೆಂದರೆ ದೈವಭಕ್ತಿ ಮತ್ತು ಲೋಕಕಾರಣ್ಯ! ಇದನ್ನು ಉಚ್ಚವರ್ಗದವರು ಮರೆಯಬಾರದೆಂದರು.

*ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವೆ!*
*ಫಲವೇನು? ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ!*
*ಛಲಮದಕ್ಕೆ ಹೋರಿ ಲಿಂಗ ಭೇದವ ಮಾಡುವೆ*
*ಜಂಗುಳಿಯ ಕಾವ ಗೋವಳ ಹಲವು ಪಶುವ ನಿವಾರಿಸುವಂತೆ!*
*ತನು ಭಕ್ತನಾಯಿತ್ತೆನ್ನ ಮನ ಭವಿ!*
*ಕೂಡಲಸಂಗಮದೇವ!*

ಯಾವನಾದರೂ ನಿಷ್ಠೆಯೊಂದಿದ್ದರೆ ವೀರಶೈವನಾಗಬಹುದು, ಯಾವ ವೀರಶೈವನಾಗಲಿ ಲೋಕಹಿತಾಕಾಂಕ್ಷಿಯಾಗಿದ್ದರೆ ಜಂಗಮನಾಗಬಹುದು. ಈ ಸಂಪ್ರದಾಯವು ಕಡೆಯ ಪಕ್ಷ ಬಸವಣ್ಣನವರ ಕಾಲದಿಂದಲೂ ಪ್ರಚಲಿತವಿದೆ. ಆದರೆ ಇದನ್ನು ಒಪ್ಪದ ಸಂಪ್ರದಾಯ ಮೂಢರನ್ನು ಬಸವಣ್ಣನವರು ಈ ತಮ್ಮ ವಚನದಲ್ಲಿ ಕಟುವಾಗಿ ಟೀಕಿಸಿ, ಜಾತಿಭೇದವನ್ನೇ ಅಲ್ಲಗಳೆದ ವೀರಶೈವಧರ್ಮದ ಅನುಯಾಯಿಗಳೆನಿಸಿಕೊಂಡವರು ಕೆಲವರು ಜಾತಿಯ ಆಧಾರದ ಮೇಲೆ ಶಿವಭಕ್ತರಲ್ಲೇ ತಾರತಮ್ಯ ತೋರುವುದನ್ನು ಪ್ರತಿಭಟಿಸಿರುವರು.

ಅನ್ಯರಲ್ಲಿ ಇರುವ ಗುಣಗಳನ್ನು ಕುರುಡುಕಾಣುವ, ಮತ್ತು ತನ್ನಲ್ಲಿ ಇಲ್ಲದ ಗುಣಗಳನ್ನು ಅತಿಶಯಿಸಿ ಕಾಣುವ ವಿಚಿತ್ರ ಪೈತ್ಯಭಾವವೇ ಅಹಂಕಾರವೆನ್ನುವುದು, ಇಂತಹ ಅಹಂಕಾರ ಉಳ್ಳವನಿಗೆ ಜಂಗಮದಲ್ಲಾಗಲಿ, ಲಿಂಗದಲ್ಲಾಗಲಿ ಗೌರವವಿಲ್ಲ. ಜಗದ್ಧಿತಕ್ಕಾಗಿ ಸದಾಚಾರವನ್ನು ಕೈಗೊಂಡು, ಅದಕ್ಕಾಗಿಯೇ ತನ್ನ ತನು-ಮನ-ಧನಗಳನ್ನು ತೇಯುತ್ತಿರುವ ಜಂಗಮಮೂರ್ತಿಯಲ್ಲಿ ಅಹಂಕಾರಿಗೆ ಕಾಣುವ ಕುತೂಹಲಾಂಶವೆಂದರೆ – ಆ ಜಂಗಮನು ಪೂರ್ವಾಶ್ರಮದಲ್ಲಿ ಯಾವ ಜಾತಿಯವನಾಗಿದ್ದನೆಂಬುದು ಆ ಅಹಂಕಾರಿಗೆ ಜಂಗಮನ ಜಾಗೃತಿ- ಸಾಧನೆ-ಸಿದ್ಧಿಗಳ ಕಡೆಗೆ ಗಮನವೇ ಇಲ್ಲ.

ಅಂತಹ ಅಹಂಕಾರಿಯು ಉತ್ತಮಕುಲೋತ್ಪನ್ನನಾದರೂ, ಜಂಗಮ ದೂಷಕನಾದ ಅವನು ಮಾಡುವ ಲಿಂಗಪೂಜೆಯು, ಮಾಡಿ ಜಂಗಮದೂಷಣೆಗೆ ಪ್ರಾಯಶ್ಚಿತ್ತರೂಪವಾಯಿತೇ ಹೊರತು, ಪುಣ್ಯಕಾರಿಯಾಗಲಿಲ್ಲ. ಜೊತೆಗೆ ಅವನು ಲಿಂಗದೂಷಕನೂ ಆಗಿ : ''ನಾನು ಇಷ್ಟಲಿಂಗ ಪೂಜಕ, ಸ್ಥಾವರಲಿಂಗವನ್ನು ಪೂಜಿಸುವುದಿಲ್ಲ''ವೆಂದು ಲಿಂಗದೂಷಣೆಯನ್ನೂ ಮಾಡಿಯಾನು. ನಿರಹಂಕಾರಕ್ಕೆ ಪ್ರತೀಕವಾದ ಲಿಂಗದಲ್ಲಿ, ಮತ್ತು ತ್ಯಾಗ-ದುಡಿಮೆಗಳಿಗೆ ಪ್ರತೀಕವಾದ ಜಂಗಮದಲ್ಲಿ ಹೀಗೆ ವಿಶ್ವಾಸವಿಲ್ಲದವನು ಎಂಥ ಕುಲೀನನೆನಿಸಿಕೊಂಡರೇನು? ಅವನು ಮಹಾಹೀನ. ದನಕಾಯುವವನು ದನಗಳನ್ನು ಆ ಬಣ್ಣ ಈ ಬಣ್ಣವೆಂದು ಗುರುತಿಸುವಂತೆ, ಮಹತ್ತಿನಲ್ಲಿ ತರತಮವೆಣಿಸುವವನು ಶಿವಭಕ್ತನಲ್ಲ. ವಿಭೂತಿ ಮುಂತಾದ ಶಿವಲಾಂಛನಗಳಿಂದ ಅವನ ದೇಹ ಶಿವಭಕ್ತನಂತೆ ಕಂಡರೂ, ಅವನ ಮನಸ್ಸು ಅಚ್ಚಭವಿಯಾಗಿರುವುದು.

(ಕೃಪೆ : ಬಸವ ವಚನಾಮೃತ)



# ಹೆಸರು

– ಟಿ.ಆರ್. ಮಹಾದೇವಯ್ಯ
ಸದಸ್ಯರು, ರಾಜ ಭಾಷಾ ಆಯೋಗ
ಕರ್ನಾಟಕ ಸರ್ಕಾರ, ಬೆಂಗಳೂರು.

ಸಮಾಜದಲ್ಲಿ ವ್ಯಕ್ತಿಗಳನ್ನು ಗುರುತಿಸಲು ಹೆಸರಿಟ್ಟು ಕರೆಯಬೇಕಾದ್ದು ಅನಿವಾರ್ಯ. ಕೂಗಿ ಕರೆಯಲು, ಗುರುತಿಸಲು ಇದು ಬೇಕು. ಏನೆಂದು ಹೆಸರಿಡುವುದು? ಕರೆಯುವುದಕ್ಕೆ ಒಂದು ಹೆಸರು ಇದ್ದರೆ ಸಾಕು ಎಂದು ಯಾವುದೋ ಒಂದು ಹೆಸರಿಡಲಾದೀತೆ? ಯೋಚಿಸಿರಬೇಕು ನಮ್ಮ ಪೂರ್ವಜರು. ಹುಟ್ಟಿದ ಮಕ್ಕಳಿಗೆ ದೇವರ ಹೆಸರನ್ನೇ ಇಟ್ಟರು. ದೇವರ ದಿವ್ಯನಾಮವನ್ನು ಉಚ್ಚರಿಸಿದಂತೆಯೂ ಆಯಿತು, ದೈವಿಗುಣಗಳು ಮಕ್ಕಳಲ್ಲಿ ಬೆಳೆಯಲೆಂಬ ಸದಾಶಯವು ನೆರವೇರಿದಂತೆಯೂ ಆಯಿತು. ಮತ್ತೆ ಕೆಲವರು ತಮ್ಮ ಕುಟುಂಬದ ಹಿರಿಯರ ಹೆಸರನ್ನು ಇಡುತ್ತಾರೆ. ಅದೂ ಸಹ ಕೃತಜ್ಞತೆಯ ದ್ಯೋತಕವೇ. ಹಿರಿಯರ ಪರಿಶ್ರಮ-ದಕ್ಷತೆ, ಸನ್ನಡತೆ ಸದಾಚಾರಗಳು ಆ ವಂಶದ ಕುಡಿಗಳಾದ ಮಕ್ಕಳಲ್ಲಿಯೂ ಬರಲಿ ಎಂಬ ಆಸೆ ಅವರಿಗೆ. ಮತ್ತು ಕೆಲವರು ತಮ್ಮ ಮಕ್ಕಳಿಗೆ ಚಂದ ಚಂದದ ಹೆಸರಿಟ್ಟು ಕರೆಯಬೇಕೆಂದು ನವೀನವಾದ ಹೆಸರಿಟ್ಟು ಕರೆಯುತ್ತಾರೆ, ಅದೆಲ್ಲ ಸರಿ.

ಬಹಳಷ್ಟು ಸಂದರ್ಭಗಳಲ್ಲಿ ಕರೆಯುವ ಹೆಸರು ಅಂಕಿತನಾಮವಾಗಿ ಉಳಿಯುತ್ತದೆಯೇ ಹೊರತು ಅನ್ವರ್ಥನಾಮವಾಗುವುದಿಲ್ಲ. ಅಂದರೆ ಯಾವ ಸದಾಶಯದಿಂದ ದೇವರ ಅಥವಾ ಹಿರಿಯರ ಹೆಸರಿಡುತ್ತಾರೋ ಅದರಂತೆ ಅವರು ಬದುಕುವುದಿಲ್ಲ. ಹಿರಿಯರ ಆಶಯ, ನಿರೀಕ್ಷೆಗಳು ಸುಳ್ಳಾಗುವ ಸಂದರ್ಭಗಳೇ ಹೆಚ್ಚು.

ಶಿವಗುಣಗಳನ್ನು ಹೊಂದಿರದ ಶಿವಣ್ಣ, ಅನ್ನದಾನ ಮಾಡಿ ಗೊತ್ತೇ ಇರದ ಅನ್ನದಾನಯ್ಯ, ನಡತೆಗೆಟ್ಟ ಸುಶೀಲ, ಹಿಂಸಾತ್ಮಕ ಬುದ್ಧಿಯ ಬಸವರಾಜ, ಬಡತನದ ಬವಣೆಯಲ್ಲಿರುವ ಲಕ್ಷ್ಮೀನಾರಾಯಣ ಇತ್ಯಾದಿ. ಸಮಾಜದಲ್ಲಿ ನಿತ್ಯವೂ ನೋಡಸಿಗುತ್ತಾರೆ. ಅವರು ತಮ್ಮ ಹೆಸರಿಗೆ ತಕ್ಕಂತೆ ಬಾಳುತ್ತಿಲ್ಲ. ಅಲ್ಲೆಲ್ಲಾ ಹೆಸರು ಕರೆಯುವುದಕ್ಕೆ ಒಂದು ಅಕ್ಷರಗಳ ಲಾಂಛನವಾಗುತ್ತದೆ, ಅಷ್ಟೇ. ಇಟ್ಟ ಹೆಸರಿಗೆ ತಕ್ಕಂತೆ ಬದುಕಬೇಕು ಎಂಬ ಭಾವನೆಯೇ ಇಲ್ಲದ ಹೊತ್ತಿನಲ್ಲಿ ಯಾವ ಹೆಸರಿಟ್ಟರೇನು? ಈ ಮಾತು ವ್ಯಕ್ತಿಗಳಿಗೆ ಮಾತ್ರವಲ್ಲ ಹೆಸರು ಹೊತ್ತ ಸಂಸ್ಥೆಗಳಿಗೂ ಅನ್ವಯಿಸುತ್ತದೆ.

ಮಾನವ ಇತಿಹಾಸವನ್ನು ನಾವು ನೋಡಿದರೆ ಕೆಲವು ದಿವ್ಯನಾಮಗಳು ನಮ್ಮ ಮನಸ್ಸಿನ ಮೇಲೆ ಅಚ್ಚೊತ್ತಿ ನಿಲ್ಲುತ್ತದೆ. ಹೆಸರು ಕಿವಿಯ ಮೇಲೆ ಬೀಳುತ್ತಿದ್ದಂತೆಯೇ ಅವರ ಘನವ್ಯಕ್ತಿತ್ವಗಳು ನಮ್ಮ ಕಣ್ಣ ಮುಂದೆ ನಿಲ್ಲುತ್ತವೆ. ಆ ಒಂದೊಂದು ಹೆಸರಿನ ಹಿಂದೆ ಒಂದೊಂದು ಮಾನವೀಯ ಮೌಲ್ಯದ ಇತಿಹಾಸದ ಸುರುಳಿ ಬಿಚ್ಚುತ್ತಾ ಹೋಗುತ್ತದೆ. ಆ ಹೆಸರು ಸಚ್ಚಾರಿತ್ರ್ಯದ, ಮಾನವ ಹಿತೈಷಿಗುಣದ ಪ್ರತೀಕವಾಗಿ ಇರುತ್ತದೆ. ಬುದ್ಧನ ಹೆಸರು ಕೇಳುತ್ತಿದ್ದಂತೆ ಕರುಣೆ, ಜಿನನ ಹೆಸರು ಅಹಿಂಸೆ ಕೇಳುತ್ತಿದ್ದಂತೆ ಜನಪರ ಯೇಸುವಿನ ಹೆಸರು ಕಿವಿಯ ಮೇಲೆ ಬೀಳುತ್ತಿದ್ದಂತೆ ಅನುಕಂಪ, ಬಸವನ ಹೆಸರು ಕೇಳುತ್ತಿದ್ದಂತೆ ಜನಪರ ಕಾಳಜಿ ಜೊತೆಗೂಡಿ ಬರುತ್ತವೆ. ಇಲ್ಲೆಲ್ಲಾ ವ್ಯಕ್ತಿ ಮತ್ತು ಗುಣಗಳು ಒಂದು ನಾಣ್ಯದ ಎರಡು ಮುಖಗಳಾಗಿವೆ. ಅವರ ಹೆಸರನ್ನು ನಾವು ಶ್ರದ್ಧಾ ಭಕ್ತಿ ವಿಶ್ವಾಸದಿಂದ ಉಚ್ಚರಿಸಿದರೆ ಸಾಕು, ಆ ಗುಣಗಳು ನಮ್ಮಲ್ಲಿ ಅಳವಡುತ್ತವೆ ಎಂದು ಭಾವಿಸುವಷ್ಟು ಅವು ಅನ್ವರ್ಥವಾಗಿವೆ. ಇದಕ್ಕೆ ಕಾರಣ ಅವರದು ನಡೆ-ನುಡಿಗಳೊಂದಾದ ಸ್ವಾರ್ಥರಹಿತವಾದ ಬದುಕಾಗಿತ್ತು. ಅಂತೆಯೇ ಅವರ ಹೆಸರಿನೊಡನೆ ಅವರ ಜೀವನಾದರ್ಶ ಅನನ್ಯವಾಯಿತು.

ಇಂಥ ದೊಡ್ಡವರ ಹೆಸರನ್ನು ನಾನು ಮೇಲಿಂದ ಮೇಲೆ ಕಿವಿಯಲ್ಲಿ ಕೇಳಬೇಕು, ಬಾಯಲ್ಲಿ ನುಡಿಯಬೇಕು. ಆದರ್ಶವಾದ ಅವರ ಬದುಕಿನ ಒಳ್ಳೆಯ ಅಂಶಗಳು ನಮಗೆ ಮೈಗೂಡಲೆಂದು ಬಯಸುವುದು ಸಹಜವೇ. ಈ ಕಾರಣಕ್ಕಾಗಿಯೇ ನಾವು ದೊಡ್ಡವರ ಹೆಸರನ್ನು ಮಕ್ಕಳಿಗೆ, ಸಂಸ್ಥೆಗಳಿಗೆ, ರಸ್ತೆ ಬದಿಗಳಿಗೆ ಇಡುತ್ತಿದ್ದೇವೆ. ಆಶ್ಚರ್ಯವೇನೂ ತುಂಬಾ ಒಳ್ಳೆಯದೇ. ಆದರೆ ವಾಸ್ತವವಾಗಿ ಏನಾಗುತ್ತಿದೆ?

ನಾವು ಎಂಥ ಸೌಭಾಗ್ಯಕಾಂಕ್ಷಿಗಳು. ಕಡಿಮೆ ಶ್ರಮದಲ್ಲಿ ಹೆಚ್ಚು ಫಲ ಬಯಸುವವರು. ಕೈಕೆಸರು ಮಾಡಿಕೊಳ್ಳದೆಯೆ ಬಾಯಿ ಮೊಸರು ಮಾಡಿಕೊಳ್ಳಬಯಸುವವರು. ಇದು ನಾವು ಆಡುವ ಮಾತಿಗೂ ಅನ್ವಯಿಸುತ್ತದೆ. ಇಟ್ಟ ದಿವ್ಯವಾದ ಹೆಸರುಗಳನ್ನು ನಾಮಪೂರ್ತಿ ಉಚ್ಚರಿಸುತ್ತೇವೆಯೇ? ಪ್ರೀತಿಗೆಂದೋ ಕೋಪ ಪ್ರದರ್ಶನಕ್ಕೋ ಹೆಸರನ್ನು ವಿಕೃತಿಗೊಳಿಸುತ್ತೇವೆ. ಕೃಷ್ಣಮೂರ್ತಿ ಹೆಸರು ಕಿಟ್ಟಿ ಎಂದು ಕೆಟ್ಟು ಹೋಗುತ್ತೆ. ಪ್ರೀತಿಯ ಹೆಸರಿನಲ್ಲೇ ನಿರ್ಮಲ ನಿಮ್ಮಿ ಆಗಿ ಪ್ರಮೀಳಾ ಪಮ್ಮಿ ಎಂದು ಸಂಕುಚಿಗೊಳ್ಳುತ್ತವೆ. ಕಾತ್ಯಾಯಿನಿ ಹೆಸರು ಪ್ರೀತಿಯಿಂದ ಕಾತಿ ಆಗಿ, ಕೋಪ ಬಂದಾಗ ಕತ್ತೆ ಆಗಿ ಬಿಡುತ್ತದೆ. ಬಸವಣ್ಣ 'ಬಸ್ಯಾ' ಎಂದು ಕರೆಸಿಕೊಂಡು ಹೆಸರೇಳುವ ಉದಾತ್ತ ಆಶಯ ಈಡೇರದೆ ಕರೆಯೋದಕ್ಕೆ ಒಂದು ಹೆಸರು ಆಗುವ ಸಂಭವವೇ ಜಾಸ್ತಿ.

ಇನ್ನು ರಸ್ತೆಗಳಿಗೆ, ಸಂಸ್ಥೆಗಳಿಗೆ ನಗರದ ಬಡಾವಣೆಗಳಿಗೆ ಇಟ್ಟ ದೊಡ್ಡವರ ಹೆಸರುಗಳಿಗೂ ಅದೇ ಗತಿ. ರವೀಂದ್ರನಾಥ ಠಾಕೂರ್ ನಗರ ಆರ್.ಟಿ. ನಗರವಾಗಿ, ಮಹಾತ್ಮಗಾಂಧಿ ರಸ್ತೆ ಎಂ.ಜಿ. ರೋಡ್ ಆಗಿ ಪರಿಚಿತ ನೆಲೆಯಿಂದ ಬೇರೆಯಾದ ಹೆಸರಾಗಿ ಹೋಗುತ್ತವೆ.

ಹೆಸರಿಸುವ ಮೂಲ ಆಶಯಗಳೇ ಬುಡಮೇಲಾಗುತ್ತಿರುವ ಈ ಸನ್ನಿವೇಶದಲ್ಲಿ ಯಾವ ಹೆಸರಿಟ್ಟರೇನು? ನುಡಿದಂತೆ ನಡೆಯಿರಬೇಕು, ಹೆಸರಿಗೆ ತಕ್ಕಂತೆ ಬದುಕು ಇರಬೇಕು, ಇಟ್ಟ ಹೆಸರುಗಳಿಸಬೇಕೆಂಬ ಭಾವನೆ ಮೂಡುವ ತನಕ ದೊಡ್ಡವರ ಹೆಸರೆತ್ತುವ ಅರ್ಹತೆಯೂ ನಮಗೆ ಬಾರದು.

★







# ದಾರ್ಶನಿಕ ಕವಿ ಡಾ. ಕುವೆಂಪು

– ಎಚ್.ಎಸ್. ಸಿದ್ದಗಂಗಪ್ಪ
೫೩/೧, ೩ನೇ ಅಡ್ಡರಸ್ತೆ, ವಿಶ್ವೇಶ್ವರಯ್ಯ ರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ,
ಬೆಂಗಳೂರು – ೫೬೦ ೦೪೦.

ರಾಷ್ಟ್ರಕವಿ, ಜ್ಞಾನಪೀಠ ಪ್ರಶಸ್ತಿ ವಿಜೇತ, ಪದ್ಮವಿಭೂಷಣ, ಕರ್ನಾಟಕ ರತ್ನ ಡಾ. ಕುವೆಂಪು ಅವರು ಜಗದ ಕವಿಯಾಗಿ, ಯುಗದ ಕವಿಯಾಗಿ, ಕಾವ್ಯರ್ಷಿಯಾಗಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿ, ವಿಶ್ವಮಾನವ ಸಂದೇಶವನ್ನು ಸಾರಿದ ಮಹಾನ್‌ಚೇತನ. ತಮ್ಮ ಕಾವ್ಯದ ಮೂಲಕ ಕನ್ನಡಿಗರ ಹೃದಯವೀಣೆಯನ್ನು ಮೀಟಿದ ವಿಶ್ವಕವಿ, ನಿಸರ್ಗಪ್ರಿಯ, ಚಿಂತನಶೀಲ, ಕಾವ್ಯ ಗೊಮ್ಮಟ, ದಾರ್ಶನಿಕ.

''ಎಲ್ಲಾದರೂ ಇರು ಎಂತಾದರು ಇರು, ಎಂದೆಂದಗೂ ನೀ ಕನ್ನಡವಾಗಿರು'', ''ಕನ್ನಡಕ್ಕೆ ಹೋರಾಡು ಕನ್ನಡದ ಕಂದಾ'', ''ಕನ್ನಡಕ್ಕಾಗಿ ಕೈಯೆತ್ತು ನಿನ್ನ ಕೈ ಕಲ್ಪವೃಕ್ಷವಾಗುತ್ತದೆ. ಕನ್ನಡಕ್ಕಾಗಿ ಕೊರಳೆತ್ತು, ಅಲ್ಲಿ ಪಾಂಚಜನ್ಯ ಮೂಡು ತ್ತದೆ'', ''ಕನ್ನಡವೇ ಸತ್ಯ, ಕನ್ನಡವೇ ನಿತ್ಯ'' ಎಂದು ಕನ್ನಡಕ್ಕಾಗಿ ತುಡಿದರು, ದುಡಿದರು. ಕನ್ನಡ ನಾಡು ನುಡಿಯ ಬಗ್ಗೆ ಅವರಿಗಿದ್ದ ಅಭಿಮಾನದ ಕನ್ನಡ ಬಗೆಗಿನ ಚಿಂತನ ಕರ್ನಾಟಕದ ಇತಿಹಾಸದಲ್ಲಿ ಹಚ್ಚ ಹಸಿರು.!



''ನಾನು ಅವಧೂತನಾಗಿ ಹೋಗುವುದಿಲ್ಲ ಕನ್ನಡವು ತನ್ನ ಸ್ಥಾನವನ್ನು ಅಧಿಕೃತವಾಗಿ ಪಡೆಯುವ ತನಕ, ತನ್ನ ಪ್ರಾಣವಿರುವ ತನಕ ಕನ್ನಡಕ್ಕಾಗಿ ದುಡಿಯುವುದು ಕನ್ನಡಕ್ಕಾಗಿ ದುಡಿಯಲು ವ್ಯಕ್ತಿಗಳನ್ನು ಪ್ರಚೋದಿಸುವುದು, ಅದಕ್ಕಾಗಿ ಭಗವಂತನಲ್ಲಿ ಮೊರೆಯಿಡುವುದು ಮಾಡುತ್ತೇನೆ'' ಎಂದು ನುಡಿದು ಕೊನೆಯ ತನಕ ಹಾಗೆಯೇ ನಡೆದು ತೋರಿಸಿದ ಮಹಾನ್ ಸಾಧಕ. ಕನ್ನಡ ಸಾಹಿತ್ಯಕ್ಷೇತ್ರವನ್ನು ಶ್ರೀಮಂತಗೊಳಿಸಿದ ಮಹಾಚೇತನ, ಗೌರಿಶಂಕರ.!

### *ಕನ್ನಡ ಭಾಷೆಯ ಬಗ್ಗೆ ಅಭಿಮಾನ*

ಕನ್ನಡನಾಡು ನುಡಿಯ ಬಗ್ಗೆ ಅಪಾರ ಅಭಿಮಾನ, ಕಳಕಳಿಯನ್ನು ಹೊಂದಿದ್ದರು. ಶಿಕ್ಷಣ ಮಾಧ್ಯಮ ಮಾತೃಭಾಷೆಯಲ್ಲಿಯೇ ನಡೆಯಬೇಕೆಂಬುದು ಅವರ ದೃಢ ನಿಲುವಾಗಿತ್ತು. ೧೯೫೭ರಲ್ಲಿ ಧಾರವಾಡದಲ್ಲಿ ನಡೆದ ಮೂವತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಅವರು ಹೇಳಿದ ಒಂದೊಂದು ನುಡಿ ಮುತ್ತುಗಳು ಅನರ್ಘ್ಯ ರತ್ನಗಳು.

''ಸರಕಾರವಾಗಲಿ, ವಿದ್ಯಾಭ್ಯಾಸ ಇಲಾಖೆಗಳಾಗಲಿ, ವಿಶ್ವವಿದ್ಯಾಲಯಗಳಾಗಲಿ, ಇತರ ಸಾಂಸ್ಕೃತಿಕ ಸಂಸ್ಥೆಗಳಾಗಲಿ; ಕಡೆಗೆ ವ್ಯಾಪಾರ ವಾಣಿಜ್ಯಾದಿ ಸಂಸ್ಥೆಗಳಾಗಲಿ ದೇಶ ಭಾಷೆಗೆ ಮೊತ್ತ ಮೊದಲನೆಯ ಸ್ಥಾನ ಕೊಡಬೇಕು. ಹಾಗೆ ಮಾಡದಿದ್ದರೆ ಪ್ರಜಾಪ್ರಭುತ್ವದ ಬುಡದ ಬೇರಿಗೆ ಚನ್ನೀರೆರಚಿದಂತಾಗುತ್ತದೆ. ನಮ್ಮ ಭಾಷೆ ವಿದ್ಯಾಭ್ಯಾಸದ ಅತ್ಯುನ್ನತ ಮಟ್ಟಗಳಲ್ಲಿಯೂ ಶಿಕ್ಷಣ ಮಾಧ್ಯಮವಾಗಲು ಸಮರ್ಥವಾಗಿದೆ ಎನ್ನುವುದರ ಬಗೆಗೆ ಯಾರೂ ಸಂದೇಹ ಪಡಬೇಕಾಗಿಲ್ಲ ... ವಿವಿಧ ವಿಜ್ಞಾನ ಶಾಸ್ತ್ರಗಳಲ್ಲಿರುವ ಸಾವಿರಾರು ಪಾರಿಭಾಷಿಕ ಪದಗಳನ್ನು ನಾವು ಹಾಗೆ ಹಾಗೆಯೇ ನಮ್ಮ ನಮ್ಮ ಲಿಪಿಗಳಲ್ಲಿ ಬರೆದು ವ್ಯವಹರಿಸಿದ್ದೇ ಆದರೆ ವಿಜ್ಞಾನ ವಿದ್ಯೆಗೂ ಕಾವ್ಯರಂಗದಲ್ಲಿ ಅದರ ಪ್ರಯೋಗಕ್ಕೂ ಸೌಲಭ್ಯವುಂಟಾಗುತ್ತದೆ. ಆದ್ದರಿಂದ ವೈಜ್ಞಾನಿಕ ಪರಿಭಾಷೆಗೆ ನಮ್ಮ ಭಾಷೆಗಳಲ್ಲಿ ಪದಗಳಲ್ಲಿ ಎಂಬ ಕೊರತೆ ಉದ್ಭವಿಸುವುದೇ ಇಲ್ಲ. ಕರ್ನಾಟಕದಲ್ಲಿ ಕನ್ನಡ ಪ್ರಥಮ ಭಾಷೆಯಾಗದಿದ್ದರೆ ಕನ್ನಡವೇ ಶಿಕ್ಷಣ ಮಾಧ್ಯಮವಾಗದಿದ್ದರೆ ಕನ್ನಡಿಗರ ಬಾಳು ಕುಂಠಿತವಾಗುತ್ತದೆ; ಕನ್ನಡಿಗರ ಏಳಿಗೆಗೆ ಧಕ್ಕೆ ಬರುತ್ತದೆ. ಕರ್ನಾಟಕದ ರಚನೆ ಅರ್ಥಹೀನವಾಗುತ್ತದೆ. ಸಾಹಿತ್ಯದ ಕೆಲವು ಪ್ರಕಾರಗಳಲ್ಲಂತೂ ಕನ್ನಡಿಗರು ಮಾತ್ರವಲ್ಲದೆ ಭಾರತೀಯರೂ ಹೆಮ್ಮೆಪಟ್ಟುಕೊಳ್ಳುವಂತಹ ಕೃತಿಗಳೂ ಮೈದೋರಿವೆ. ಅಷ್ಟೇ ಅಲ್ಲ; ಪೂರ್ಣ ಪರಿಣತ ಸ್ಥಿತಿಗೇರಿರುವ ಪ್ರಪಂಚದ ಯಾವ ಭಾಷೆಯ ಸಾಹಿತ್ಯಕ್ಕಾದರೂ ಕೋಡು ಮೂಡಿಸುವ ಕೃತಿಗಳು ಕವನ, ಕಾದಂಬರಿ, ಸಣ್ಣಕತೆ, ನಾಟಕ, ಕಾವ್ಯ, ಮಹಾಕಾವ್ಯದಿ ಪ್ರಕಾರಗಳಲ್ಲಿ ಹೊರಹೊಮ್ಮಿವೆ. ಕನ್ನಡಿಗರು ವಿನಯಕ್ಕಾಗಿ ಬಗ್ಗಿ ನಡೆಯಬಹುದು ಆದರೆ ರಿಕ್ತರಂತೆ ಕುಗ್ಗಿ ನಡೆಯಬೇಕಾಗಿಲ್ಲ''.

ಕುವೆಂಪು ಅವರ ಈ ಚಿಂತನೆ ಕಾರ್ಯರೂಪಕ್ಕೆ ಬಂದರೆ ಕನ್ನಡ ಭಾಷೆ ಕನ್ನಡಿಗರ ಸಾರ್ವಭೌಮ ಭಾಷೆಯಾಗುತ್ತದೆ. ಆಡಳಿತದ ಎಲ್ಲ ಹಂತಗಳಲ್ಲಿಯೂ ಕನ್ನಡ ಆಡಳಿತ ಭಾಷೆಯಾಗಿ ವಿಜೃಂಭಿಸುತ್ತದೆ.

ಹುಟ್ಟಿದ ವರ್ಷ ೧೯೦೪, ಡಿಸೆಂಬರ್ ೨೯. ಹಡೆದ ಪುಣ್ಯ ಜೀವಿಗಳು ತಂದೆ - ವೆಂಟಪ್ಪಗೌಡ, ತಾಯಿ - ಸೀತಮ್ಮ. ಹುಟ್ಟಿದ ಸ್ಥಳ ಚಿಕ್ಕಮಗಳೂರು ಜಿಲ್ಲೆಯ ಹಿರಿಯಕೊಡುಗೆ. ಅದು ತಾಯಿಯ ತೌರುಮನೆ. ತೊಟ್ಟಿಲಲ್ಲಿ ಮಲಗಿಸಿ ಪ್ರೀತಿಯಿಂದ ಇಟ್ಟ ಹೆಸರು ಪುಟ್ಟಪ್ಪ. ತೊಟ್ಟಿಲಲ್ಲಿ ಬಾಲ ಲೀಲೆಗಳನ್ನು ತೋರಿಸುತ್ತಾ ತಾನು ನಕ್ಕು, ಇತರರನ್ನು ನಗಿಸುತ್ತಿದ್ದ ಈ ಪುಟ್ಟ ಕಂದ ಮುಂದೆ ವಿಶ್ವಕವಿ ಯಾಗುತ್ತಾನೆಂದು ಆಗ ಯಾರು ಊಹಿಸಿರಲಿಲ್ಲ ........!

*ಶಿಕ್ಷಣ*

''ಓ'' ನಾಮ ಕಲಿತಿದ್ದು ಕುಪ್ಪಳ್ಳಿಯಲ್ಲಿ. ಅದೂ ಕೂಲಿ ಮಠದಲ್ಲಿ. ಮರಳಲ್ಲಿ ಅಕ್ಷರಗಳನ್ನು ತಿದ್ದಿ, ಬೆರಳುಗಳನ್ನು ಸವೆಸಿ ಕೊಂಡು ಅಕ್ಷರ ಕಲಿತರು. ಮನೆಯ ಮಹಡಿಯೇ ಅವರ ಭವಿಷ್ಯ ವನ್ನು ರೂಪಿಸುವ ಮೊದಲ ಶಾಲೆಯಾಯಿತು. ನಿತ್ಯ ಹರಿದ್ವರ್ಣ ದಿಂದ ಕಂಗೊಳಿಸುತ್ತಿದ್ದ ನಿಸರ್ಗ ಅವರಿಗೆ ಜೀವನೋತ್ಸಾಹವನ್ನು ತಂದುಕೊಟ್ಟಿತು. ಮುಂದೆ ಕಾವ್ಯ ರಚನೆಗೆ ಸ್ಫೂರ್ತಿಯ ನೆಲೆಯಾಯಿತು.

ಅಕ್ಷರಾಭ್ಯಾಸವನ್ನು ಮುಗಿಸಿದ ಬಾಲಕ ಪುಟ್ಟಪ್ಪ ತೀರ್ಥಹಳ್ಳಿಯ ಆಂಗ್ಲೋ ವರ್ನಾಕ್ಯುಲರ್ ಪ್ರಾಥಮಿಕ ಶಾಲೆಗೆ ಸೇರಿದರು. ನಂತರ ಮೈಸೂರಿಗೆ ಪ್ರಯಾಣ, ಅಲ್ಲಿ ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ಶಿಕ್ಷಣ. ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿ ಮಹಾರಾಜ ಕಾಲೇಜಿಗೆ ಸೇರಿ ೧೯೨೭ರಲ್ಲಿ ಬಿ.ಎ. ಪದವಿಯನ್ನು ಗಳಿಸಿದರು. ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳ ಸಲಹೆ ಹಾಗೂ ಮಾರ್ಗದರ್ಶನದಂತೆ ಎಂ.ಎ. ತರಗತಿಗೆ ಸೇರಿದರು. ಪ್ರೊ. ಟಿ.ಎಸ್. ವೆಂಕಣ್ಣಯ್ಯ ಅವರನ್ನು ಗುರುಗಳಾಗಿ ಪಡೆದ ಹೆಗ್ಗಳಿಕೆ. ಕಾಲೇಜಿನಲ್ಲಿ ಆರಿಸಿಕೊಂಡ ಐಚ್ಛಿಕ ವಿಷಯ ಮನಶಾಸ್ತ್ರ ಮತ್ತು ತತ್ವಶಾಸ್ತ್ರ ನಿರಂತರ ಗ್ರಂಥಾಧ್ಯಯನ, ಕಾವ್ಯ ಕೃಷಿಯ ನಿತ್ಯ ಕಾಯಕ. ಪರಿಣಾಮವಾಗಿ ವಯಸ್ಸಿಗಿಂತ ವೇಗವಾಗಿ ಬೆಳೆದ ಬುದ್ಧಿ ಸಾಮರ್ಥ್ಯ. ಪಾಶ್ಚಿಮಾತ್ಯ ಸಾಹಿತ್ಯ ಕಾವ್ಯಾನುಭವ. ಮಿಲ್ಟನ್ ಮತ್ತು ಶೇಕ್ಸ್‌ಪಿಯರ್ ಕವಿಯಿಂದ ಹೆಚ್ಚು ಪ್ರಭಾವ.

ನಿರಂತರ ಅಧ್ಯಯನದಿಂದ ಇಂಗ್ಲೀಷ್ ಸಾಹಿತ್ಯದ ಒಳತಿರುಳನ್ನು ಅರ್ಥಮಾಡಿಕೊಳ್ಳವುದರ ಜೊತೆಗೆ, ಆ ಸಾಹಿತ್ಯ ದಲ್ಲಿನ ಸತ್ವವನ್ನು ಅರಗಿಸಿಕೊಂಡರು. ಇಂಗ್ಲೀಷ್‌ನಲ್ಲಿ ಕಾವ್ಯ ರಚನೆ ಮಾಡಿ ಆ ಕವನಗಳ ಒಂದು ಸಂಕಲವನ್ನು ಪ್ರಕಟಿಸಿದರು. ಕುವೆಂಪು ಅವರು ಒಮ್ಮೆ ಶ್ರೀರಂಗಪಟ್ಟಣಕ್ಕೆ ಬಂದಿದ್ದ ಐರ್‌ಲೆಂಡಿನ ಸಾಹಿತಿ ಜೇಮ್ಸ್ ಎಚ್. ಕಸಿನ್ಸ್ ಅವರಿಗೆ ಕವನ ಸಂಕಲನವನ್ನು ತೋರಿಸಿದರು. ಅದನ್ನು ನೋಡಿದ ಕಸಿನ್ಸ್ ಮೆಚ್ಚುಗೆಯ ನುಡಿಗಳನ್ನಾಡಿ, ಕನ್ನಡದಲ್ಲೇಕೆ ಬರೆಯಬಾರದು. ಎಂದು ಕೇಳಿದರು. ಆಗ ಪುಟ್ಟಪ್ಪನವರು ''ಕನ್ನಡದಲ್ಲಿ ಸಾಕಷ್ಟು ಪದ ಸಂಪತ್ತಿಲ್ಲ'' ಎಂದು ದಿಟ್ಟತನದ ಉತ್ತರವನ್ನು ಕೊಟ್ಟರು. ಅವರ ಮಾತಿಗೆ ಕಸಿನ್ಸ್ ಅವರು ''ಯಾವ ಭಾಷೆಯೂ ಇನ್ನೊಂದು ಭಾಷೆಗಿಂತ ಕೀಳಲ್ಲ, ಬುದ್ಧಿವಂತರು ಪದ ಸಂಪತ್ತನ್ನೂ ಬೆಳೆಸಬಲ್ಲರು'' ಎಂದರು.

ಕಸಿನ್ಸ್ ಅವರ ಈ ಮಾತು ಕುವೆಂಪು ಅವರನ್ನ ಮತ್ತೆ ಮತ್ತೆ ಚಿಂತನೆ ಮಾಡುವಂತೆ ಮಾಡಿತು. ಅವರ ಆಲೋಚನೆ ಹರಿತ ವಾಯಿತು. ಪ್ರಾಯೋಗಿಕ ದೃಷ್ಟಿಯಿಂದ ಮೊದಲು ಒಂದು ಇಂಗ್ಲೀಷ್ ಕವನವನ್ನು ಕನ್ನಡಕ್ಕೆ ಭಾಷಾಂತರಿಸಿ ನೋಡಿದರು. ಅದು ಇಂಗ್ಲೀಷ್ ಕವನಕ್ಕಿಂತ ಸತ್ವಪುರ್ಣವಾಗಿ, ಭಾವಪೂರ್ಣವಾಗಿ, ನಾದಮಯವಾಗಿ ಕಂಡಿತು. ಈ ಪ್ರಸಂಗ ಅವರ ಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನು ಬೀರಿತು. ಅಂದಿನಿಂದ ಇಂಗ್ಲೀಷ್ ಕಾವ್ಯ ರಚನೆ ಮಾಡುವುದನ್ನು ಬಿಟ್ಟು ಕನ್ನಡದಲ್ಲಿ ಬರೆಯಲು ಪ್ರಾರಂಭಿಸಿದರು. ೧೯೨೯ರಲ್ಲಿ ಎಂ.ಎ. ಪದವಿ ಗಳಿಸಿದರು.

*ಸಂಕ್ರಮಣ*

೧೯೨೯ರ ಅಕ್ಟೋಬರ್ ೮, ಕುವೆಂಪು ಅವರ ಜೀವನದಲ್ಲಿ ಹೊಸ ತಿರುವು. ಕಲ್ಕತ್ತೆಯ ಬಳಿಯ ಬೇಲೂರಿನ ರಾಮಕೃಷ್ಣಾಶ್ರಮ ದಲ್ಲಿ ಸ್ವಾಮಿಶಿವಾನಂದ ಅವರಿಂದ ದಿವ್ಯಾನುಗ್ರಹ. ಚಿನ್ನ ಮತ್ತಷ್ಟು ಚೊಕ್ಕವಾಯಿತು. ಅಂದಿನಿಂದ ಅವರ ದಾರ್ಶನಿಕ ದೃಷ್ಟಿ ಗಂಭೀರವಾಯಿತು. ಹೃದಯ ವೈಶಾಲ್ಯತೆ ಮತ್ತಷ್ಟು ವಿಶಾಲ ವಾಯಿತು. ಬುದ್ಧಿ ಶ್ರೀಮಂತವಾಯಿತು. ಆಲೋಚನಾ ಶಕ್ತಿ ಪ್ರಜ್ವಲಗೊಂಡಿತು. ಪ್ರತಿಭೆ ದೇದೀಪ್ಯ ಮಾನವಾಯಿತು. ಆಧ್ಯಾತ್ಮ ಸಾಧನೆಗೆ ಸ್ಫೂರ್ತಿ ದೊರೆಯಿತು. ಒಟ್ಟಿನಲ್ಲಿ ಹೊಸ ಸಂಕ್ರಮಣ ಅವರ ಜೀವನದಲ್ಲಿ ಆರಂಭವಾಯಿತು.

*ವೃತ್ತಿ ಜೀವನ*

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ವೃತ್ತಿ ಜೀವನವನ್ನು ಆರಂಭಿಸಿದ ಕುವೆಂಪು ಅವರು ಉಪಪ್ರಾಧ್ಯಾಪಕ ರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ೧೯೫೫ರಲ್ಲಿ ಮೈಸೂರು ಮಹಾರಾಜ ಕಾಲೇಜಿನ ಪ್ರಾಚಾರ್ಯರಾದರು. ಮೈಸೂರು ವಿಶ್ವವಿದ್ಯಾನಿಲಯದ ಗಂಗೋತ್ರಿಯ ಗುಡಿ ಕಟ್ಟಿದ ಕೀರ್ತಿ ಅವರದು. ಕನ್ನಡಕ್ಕೆ ಅವರು ಮೂಡಿಸಿದ ಕೋಡು ಎಲ್ಲದಕ್ಕಿಂತ ಎತ್ತರ.

*ಪ್ರಥಮ ಕವನ ಸಂಕಲನ*

ಕುವೆಂಪು ಅವರು ಕನ್ನಡದಲ್ಲಿ ಬರೆದ ಕವನಗಳ ಪ್ರಥಮ ಸಂಕಲನ ಕೊಳಲು. ''ಮಲೆನಾಡಿನ ನಿಸರ್ಗದ ಚೆಲುವು, ಶಿಲ್ಪ ವೈಭವ, ಸುಗ್ಗಿಯ ಹಿಗ್ಗು, ಮೊದಲಾದ ವಿವಿಧ ವಿಷಯಗಳು ಈ ಕವನ ಸಂಕಲನದ ವಸ್ತು ವಿಷಯಗಳು, ಮಲೆನಾಡಿನ ಗಿಡ, ಮರ,





ಗಿರಿ, ನದಿ, ಕಂದರ, ಕಾಜಾಣ, ಕೋಗಿಲೆ, ಗಿಳಿ, ಕಾಮಳ್ಳಿ, ಹಂದಿ, ದೊಡ್ಡ ಕಡ, ಮಿಗ, ಕೋಡಗ, ಸಾರಗ, ಸೀತಾಳ, ಬಕುಳಿ, ಮಲ್ಲಿಗೆ, ಮರಗಿ, ಸುರೆಹೊನ್ನೆ, ಉದಯಾಸ್ತ, ಋತು ಪರಿವರ್ತನೆ, ಒಂದೊಂದು ಗುರುವಾಗಿ ಅವರಿಗೆ ನಡೆಗಲಿಸಿವೆ'' ನುಡಿಗಲಿಸಿವೆ ಎನ್ನುತ್ತಾರೆ ಡಾ. ದೇ.ಜ.ಗೌ. ಅವರು.

''ಸುತ್ತಣ ಪರಿಸರ ಅವರಲ್ಲಿ ಮೂಡಿಬಂದ ಆಜನ್ಮ ಸಂಸ್ಕಾರ. ಬಾಲ್ಯದಲ್ಲೇ ಭಾವಲೋಕ ವಿಹಾರ, ಆತ್ಮಾನುಭೂತಿಯ ವಿಚಾರ, ಮೊದಮೊದಲು ಜನ ಬಳಕೆ, ಕ್ರಮೇಣ ಏಕಾಂತದ ಬಯಕೆ. ಬಹುರ್ಮುಖಿಕ್ಕಿಂತ ಅಂತರ್ಮುಖಿದ್ದೇ ಮೇಲುಗೈ''.

*ಸಾಹಿತ್ಯ ಕೃಷಿ*

ಕುವೆಂಪು ಅವರ ಸಾಹಿತ್ಯ ಕೃಷಿ ಕ್ಷೇತ್ರ ವಿಶಾಲವಾದುದು ಅಷ್ಟೇ ವರ್ಣಮಯವಾದದು. ಕಥೆ, ಕಾದಂಬರಿ, ಮಹಾಕಾವ್ಯ, ಖಂಡಕಾವ್ಯ, ಕಥನ ಕವನ, ಭಾವಗೀತೆ, ನಾಟಕ, ವಿಮರ್ಶೆ, ಕಾವ್ಯ ಮೀಮಾಂಸೆ, ಭಾಷಣ/ಲೇಖನ, ಜೀವನ ಚರಿತ್ರೆ, ಮಕ್ಕಳ ಸಾಹಿತ್ಯ, ಆತ್ಮಕಥೆ, ಅನುವಾದ ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೈಯಾಡಿಸಿ ೭೦ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ಪ್ರಕಟಸಿದ್ದಾರೆ. ತಾವು ಮುಟ್ಟಿದೆಲ್ಲವನ್ನು ಚಿನ್ನವಾಗಿಸಿದ್ದಾರೆ.

### ಕುವೆಂಪು ಅವರಿಗೆ ಕಾವ್ಯ ನಮನ



ನಿಶ್ಯಬ್ದದಲ್ಲಿ ನಿಂತು ನೆನೆಯುತ್ತೇನೆ
ನಿಮ್ಮಿಂದ ನಾ ಪಡೆದ ಹೊಸ
ಹುಟ್ಟುಗಳ ಗುಟ್ಟುಗಳ

ನೀವು ಕಲಿಸಿದಿರಿ ನನಗೆ ತಲೆಯೆತ್ತಿ
ನಿಲ್ಲುವುದನ್ನು,
ಕಿರಿಕುಳಗಳಿಗೆ ಜಗ್ಗದೆ
ನಿರ್ಭಯವಾಗಿ ನಡೆವುದನ್ನು
ಸದ್ದಿರದೆ ಬದುಕುವುದನ್ನು.

ಎಷ್ಟೊಂದು ಕೀಲಿ ಕೈಗಳನ್ನು ದಾನಮಾಡಿದ್ದೀರಿ
ವಾತ್ಸಲ್ಯದಿಂದ; ನಾನರಿಯದನೇಕ
ಬಾಗಿಲುಗಳನು ತೆರೆದಿದ್ದೀರಿ ನನ್ನೊಳಗೆ,
ಕಟ್ಟಿ ಹರಿಸಿದ್ದೀರಿ ಕನ್ನಡದ ಕಂಕಣವನ್ನು ಕೈಗೆ.

ಸದ್ದುಗದ್ದಲದ ತುತ್ತೂರಿ ದನಿಗಳಾಚೆಗೆ ನಿಂತು
ನಿಶ್ಯಬ್ದದಲ್ಲಿ ನೆನೆಯುತ್ತೇನೆ
ಗೌರವದಿಂದ.
ನಕ್ಷತ್ರ ಖಚಿತ ನಭವಾಗಿ ಹಬ್ಬಿಕೊಂಡಿದ್ದೀರಿ
ನನ್ನ ಸುತ್ತ.
ಪಟಬಿಚ್ಚಿ ದೋಣಿಯನ್ನೇರಿ ಕುಳಿತಿದ್ದೇನೆ
ನೀವಿತ್ತ ಹೊಸ ಹುಟ್ಟುಗಳ ಹಾಕುತ್ತ.

– ಡಾ. ಜಿ.ಎಸ್. ಶಿವರುದ್ರಪ್ಪ

*ಶ್ರೀ ರಾಮಾಯಣ ದರ್ಶನಂ*

ಕನ್ನಡಕಾವ್ಯ ದೇವಿಗೆ ಕಿರೀಟ ತೊಡಿಸಿದ ''ಶ್ರೀ ರಾಮಾಯಣ ದರ್ಶನಂ'' ಮಹಾಕಾವ್ಯ ಒಂಭತ್ತು ವರ್ಷಗಳ ತಪಸ್ಸಿನ ಫಲ. ರಾವಣನಲ್ಲಿ ರಾಮನನ್ನು ಕಾಣುವ ದಿವ್ಯ ಚೇತನ. ವಾಲ್ಮೀಕಿ ರಾಮಾಯಣದ ತಳಹದಿಯ ಮೇಲೆ ಹೊಸ ದೃಷ್ಟಿಯನ್ನು ಮೇಳವಿಸಿ, ಕುವೆಂಪು ಸೃಷ್ಟಿಸಿದ ಮಹಾಸೌಧ. ವೇದಾಂತ ದರ್ಶನದೊಂದಿಗೆ ಪಾಶ್ಚಾತ್ಯ ಕಾವ್ಯ ಮಿಮಾಂಸೆಯ ತಿರುಳನ್ನು ಕಸಿಗೊಳಿಸಿ ಮಹಾಕಾವ್ಯದ ಕಲ್ಪನೆಗೆ ಹೊಸ ಅರ್ಥವನ್ನು, ಹೊಸ ದರ್ಶನವನ್ನು ನೀಡಿ ಕನ್ನಡಕ್ಕೆ ಆಧುನಿಕ ಭಾರತೀಯ ಸಾಹಿತ್ಯದಲ್ಲಿ ಅಗ್ರಮಾನ್ಯ ಸ್ಥಾನ ನೀಡಿದ್ದು ಅವರ ಅಪೂರ್ವ ಸಾಧನೆ.

ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ಕುರಿತು ''ರಾಮಾಯಣದ ಒಟ್ಟು ಕಥೆಯನ್ನು ಕುವೆಂಪು ಅವರು ಕಂಡಿರುವ ದೃಷ್ಟಿ ವಿಶಿಷ್ಟವಾಗಿದೆ. ಈ ಕಥೆಯನ್ನು ಅವಲಂಬಿಸಿ ಚಿರಂತನವಾದ ಒಂದು ದರ್ಶನದ ಅವತಾರವನ್ನು ಅವರು ಅನುಭವ ವೇದ್ಯವಾಗುವಂತೆ ಇಳಿಸಿ ತಂದಿದ್ದಾರೆ. ಕಥೆಯ ಚೌಕಟ್ಟು ವಾಲ್ಮೀಕಿಯದೇ ಆದರೂ ಅದರ ಅಂತರ್ಯದಲ್ಲಿರುವ ಚಿತ್ರ ಆಧುನಿಕ ಯುಗದ ವೈಜ್ಞಾನಿಕ ಪ್ರಜ್ಞೆಯಿಂದ ಸಿದ್ಧವಾದದ್ದು. ಅಂತೆಯೇ ಭಾರತೀಯ ತಾತ್ವಿಕ ಪರಂಪರೆಯಿಂದ ಪುಷ್ಟವಾದದ್ದು. ರಾಮ ಅವತಾರ ಪುರುಷನಾಗಿ ಪರಿಣಮಿಸಿ ನಾಡಿನ ಸಮಷ್ಟಿ ಚೇತನದಲ್ಲಿ ಚೈತನ್ಯ ಶಕ್ತಿಯಾಗಿ ಬೆಳೆದು ಬಂದುದನ್ನು ಕುವೆಂಪು ದಾರ್ಶನಿಕ ದೃಷ್ಟಿಯಿಂದ ನೋಡುತ್ತಾರೆ'' ಎಂದು ಹೇಳಿದ್ದಾರೆ.

ಕುವೆಂಪು ಅವರ ಸಮಕಾಲೀನ, ಶ್ರೇಷ್ಠಕವಿ, ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ. ದ.ರಾ. ಬೇಂದ್ರೆ ಅವರು ಕುವೆಂಪು ಅವರ ಸಾಹಿತ್ಯ ಸಾಧನೆ ಪ್ರತಿಭೆಯನ್ನು ಕುರಿತು ತಮ್ಮ ಕವನದ ಮೂಲಕ ನುಡಿ ನಮನ ಸಲ್ಲಿಸಿದ್ದಾರೆ.



*''ಯುಗದ ಕವಿಗೆ ಜಗದ ಕವಿಗೆ*
*ಶ್ರೀರಾಮಾಯಣ ದರ್ಶನದಿಂದಲಿ ಕೈ*
*ಮುಗಿದ ಕವಿಗೆ ಮಣಿಯದವರು ಯಾರು?*
*ರಾಮಕೃಷ್ಣ ವಚನೋದಿತ ಪ್ರತಿಭೆ ತೆರೆದ*
*ಕವನ ತಲೆಗೆ ತಣಿಯದವರು ಆರು?*
*ಮಲೆನಾಡಿನ ಸೌಂದರ್ಯಕ್ಕೆ ಕುಣಿದಾಡಿದ*
*ಕವಿಯ ಜತೆಗೆ ಕುಣಿಯದವರು ಆರು?''*

ಬೇಂದ್ರೆಯವರ ಒಂದೊಂದು ನುಡಿ ಮುತ್ತುಗಳು ಕುವೆಂಪು ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ. ಒಬ್ಬ ಕವಿ ಮತ್ತೊಬ್ಬ ಕವಿಗೆ ಕೊಡುವ ಅತ್ಯುನ್ನತ ಗೌರವ.

*ಪ್ರಶಸ್ತಿಗಳು*

**ಕು**ವೆಂಪು ಅವರ ''ಶ್ರೀರಾಮಾಯಣ ದರ್ಶನಂ'' ಮಹಾ ಕಾವ್ಯಕ್ಕೆ ಮೊದಲ ಪ್ರಶಸ್ತಿ ನೀಡುವುದರ ಮೂಲಕ ಕೇಂದ್ರ ಸಾಹಿತ್ಯ ಅಕಾಡೆಮಿಯು ಕನ್ನಡದ ಬೆಳವಣಿಗೆಯನ್ನು ಗೌರವಿಸಿತು. ಕನ್ನಡಕ್ಕೆ ಮೊದಲ ಜ್ಞಾನ ಪೀಠ ಪ್ರಶಸ್ತಿಯನ್ನು ತಂದು ಕೊಟ್ಟ ಹೆಗ್ಗಳಿಕೆ. ಹಲವು ವಿಶ್ವವಿದ್ಯಾನಿಲಯಗಳ ಗೌರವ ಡಾಕ್ಟರೇಟ್ ಪ್ರಶಸ್ತಿಗಳು ಅವರು ಬೇಡವೆಂದರೂ ಬಿಡದೆ ಬೆನ್ನತ್ತಿ ಬಂದವು. ಧಾರವಾಡದಲ್ಲಿ ನಡೆದ ೩೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಪದ್ಮಭೂಷಣ ಪ್ರಶಸ್ತಿ, ರಾಷ್ಟ್ರಕವಿ ಪ್ರಶಸ್ತಿ, ಪಂಪ ಪ್ರಶಸ್ತಿ, ಕರ್ನಾಟಕ ರತ್ನ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ – ಹೀಗೆ ಹಲವಾರು ಉನ್ನತ ಪ್ರಶಸ್ತಿಗಳನ್ನು ಪಡೆದ ಗೌರವ. ಪ್ರಶಸ್ತಿಗಳಿಂದ ಕುವೆಂಪು ಅವರಿಗಿಂತ ಪ್ರಶಸ್ತಿಗಳಿಗೆ ಘನತೆ ಗೌರವ ಬಂದಿತು.



ಡಾ. ಹಾ.ಮಾ. ನಾಯಕ ಅವರು ಹೇಳಿರುವಂತೆ ''ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಅವರ ಮಾಂತ್ರಿಕ ಲೇಖನಿ ಅಲಂಕರಿಸದ ಸಾಹಿತ್ಯ ಪ್ರಕಾರವಿಲ್ಲ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಹೆಚ್ಚು ಕಡಿಮೆ ಒಂದೇ ಬಗೆಯಾದ ಯಶಸ್ಸನ್ನು ಗಳಿಸಿದ ಲೇಖಕರು, ಯಾವುದೇ ಭಾಷೆಯಲ್ಲಾದರೂ ಹೆಚ್ಚಾಗಿ ಸಿಕ್ಕುವುದಿಲ್ಲ. ಈ ಬಗೆಯ ವಿರಳ ಪಂಕ್ತಿಯಲ್ಲಿ ಕನ್ನಡದ ಕುವೆಂಪು ಒಬ್ಬರೆನ್ನುವುದು ಅಭಿಮಾನದ ಸಂಗತಿ''.

ಡಾ. ಹಾ.ಮಾ. ನಾಯಕರ ಈ ಮಾತುಗಳು ಅರ್ಥಪೂರ್ಣ. ಸಮಸ್ತ ಕನ್ನಡಿಗರ ಅಭಿಮಾನಕ್ಕೆ ಪಾತ್ರರಾದ ಕವಿ ಕನ್ನಡದಲ್ಲಿ ಮತ್ತೊಬ್ಬರಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು.

**ವ್ಯೋಮಾ ವ್ಯಕ್ತಿ**

ಸಾಹಿತ್ಯದ ಮೂಲಕ ಸಾಮಾಜಿಕ ಬದುಕನ್ನು ಕೆದಕಿ ನೋಡಿರುವ ಈ ನುಡಿ ವೈದ್ಯ. ಅದರ ರೋಗ ನಿವಾರಣೆಗೆ ಕೊಟ್ಟ ಗುಳಿಗೆಗಳು ಒಂದೆರಡಲ್ಲ. ಶೂದ್ರನಾಗಿ ಸರಸ್ವತಿಯ ವೀಣೆ ಹಿಡಿದು ನುಡಿಸಿದ ಕ್ರಾಂತಿ ಶಕ್ತಿ, ''ಗೊಬ್ಬರದ ಮೆಲೆ ಕಬ್ಬ'' ಬರೆದು ಸಂಪ್ರದಾಯದ ಹುಬ್ಬೇರಿಸಿದ ವ್ಯೋಮಾ ವ್ಯಕ್ತಿ.

*ಕಾವ್ಯ ಗೊಮ್ಮಟ*

**ಕ**ನ್ನಡ ಕವಿಗಳು ಕಂಡ ಕುವೆಂಪು-ಕಾವ್ಯ ಗೊಮ್ಮಟ ದೇವ, ದ್ರಷ್ಟಾರ, ಆದಿಕವಿ, ಸಂಭೂತಿ, ಜ್ಞಾನಗಂಗೋತ್ರಿ, ನುಡಿ ರೂವಾರಿ, ಶೃಂಗಸಮ ವ್ಯಕ್ತಿ, ನಾಡು ನುಡಿಗಳಿಗೆ ಚಿರಮಂತ್ರ ಶಕ್ತಿ, ಕಾವ್ಯ ಮಯೂರ, ಯುಗ ಕವಿ, ಜಗಕವಿ, ಕರುನಾಡ ಸಿರಿಗುಡಿಯ ನಿತ್ಯ ನಂದಾ ದೀಪ.



**ಗೊ.**ರು. ಚನ್ನಬಸಪ್ಪ ಅವರು ಹೇಳಿದಂತೆ ''ಮಹಾಕವಿ ಪುಟ್ಟಪ್ಪನವರು ಭಾವಲೋಕ ದಲ್ಲಿದ್ದರೂ ಭೂಮಿ ಬಿಟ್ಟು ನಿಂತವರಲ್ಲ. ವ್ಯಕ್ತಿ, ಸಮಾಜ, ರಾಷ್ಟ್ರಗಳ ಬದುಕಿಗೆ ಬೆಲೆ ಕೊಟ್ಟವರು. ಇಲ್ಲಿನ ಸಿಹಿ-ಕಹಿ ಅನುಭವಿಸಿ ದವರು. ಶಿವಶರಣರು ಹೇಳುವಂತೆ ಕಳ್ಳಗಂಜಿ ಕಾಡ ಹೊಕ್ಕವರಲ್ಲ. ಹುಲಿಗಂಜಿ ಹುತ್ತ ಸೇರಿದವರಲ್ಲ. ಕಾಲಕ್ಕಂಜಿ ಭಕ್ತರಾದವರಲ್ಲ. ಮಾನವ ಜೀವನವನ್ನು ತಮ್ಮದೇ ಆದ ದೃಷ್ಟಿಯಿಂದ ಕಂಡಕೊಂಡವರು. ಇದ್ದು ಇಲ್ಲದಂತೆ ಇರುವ ಬಗೆಯನ್ನು ತೋರಿಸಿ ಕೊಟ್ಟರು''.

**ಕಾ**ವ್ಯ ಧರ್ಮಕ್ಕೆ ಕುವೆಂಪು ಒಂದು ವ್ಯಾಖ್ಯಾನ. ಅವರ ತತ್ವದರ್ಶನ ವಿನೂತನ ನಿತ್ಯದರ್ಶನ, ''ಕಲ್ಲು ರೊಟ್ಟಿಯಾದರೆ ಮಾತ್ರ ಪವಾಡವಲ್ಲವೇನು? ಕುವೆಂಪು ಅವರದು ಜಡದಲ್ಲಿ ಚೇತನ ಕಾಣುವ ಅಂತರ್‌ದರ್ಶನ. ಪ್ರಕೃತಿಯೇ ಅವರ ಭಗವಂತ.

**ಕ**ನ್ನಡದ ಬಗೆಗೆ ಕರ್ನಾಟಕದ ಬಗೆಗೆ ಅವರು ಬರೆದಂತೆ ಬರೆದವರು ವಿರಳ. ಕನ್ನಡಕ್ಕಾಗಿ, ಕರ್ನಾಟಕಕ್ಕಾಗಿ, ಭಾರತಕ್ಕಾಗಿ ತಮ್ಮ ಬದುಕನ್ನು ಮುಡುಪಾಗಿಟ್ಟ ಮಹಾನ್ ವ್ಯಕ್ತಿ, ''ನಾಡು ಒಂದಾಗಿ, ನುಡಿ ಒಂದಾಗಿ ಜನಮನದಲ್ಲಿ ಭಾವೈಕ್ಯ ಬೆಳೆಯ ಬೇಕು'' ಎಂಬುದು ವಿಶ್ವಕವಿಯ ನಿರಂತರ ಕಾಳಜಿಯಾಗಿತ್ತು.

**ಕು**ವೆಂಪು ಅವರು ಸುಮಾರು ಏಳು ದಶಕಗಳ ಕಾಲ ಕನ್ನಡ ಸಾಹಿತ್ಯವನ್ನು ಅಪೂರ್ವ ರೀತಿಯಲ್ಲಿ ವೈವಿಧ್ಯಮಯವಾಗಿ ಶ್ರೀಮಂತಗೊಳಿಸಿದ ಸಾಹಿತ್ಯ ಕ್ಷೇತ್ರದ ದಿಗ್ಗಜ ಅಗ್ರಮಾನ್ಯ. ''ಮನುಜ ಮತ ವಿಶ್ವಪಥ'' ಅವರ ಬಾಳಿನ ಉಸಿರಾಗಿತ್ತು. ''ಎಲ್ಲ ಮೌಢ್ಯಗಳನ್ನು ಸಂಕುಚಿತ ಭಾವನೆಗಳನ್ನು ತೊಡೆದು ನಿರಂಕುಶಮತಿ ಗಳಾಗಿ'' ಎಂಬುದು ಅವರ ದಿವ್ಯ ಸಂದೇಶವಾಗಿತ್ತು.

''**ಯು**ಗದ ಕವಿ. ದ್ರಷ್ಟಾರ, ಕನ್ನಡದ ಮುಂಬರಿವಿಗಾಗಿ ಸದಾ ಶ್ರಮಿಸಿದ ಮಹಾನ್ ಚೇತನ. ವಿಚಾರವಾದಿ, ವಿಶ್ವಪ್ರೇಮಿ, ಕನ್ನಡಕ್ಕಾಗಿ ಕೆಚ್ಚಿನಿಂದ ಹೋರಾಡುವವರ ತಂಡದ ಸ್ಫೂರ್ತಿ. ಮಾನಸಗಂಗೋತ್ರಿಯ ಕನಸುಗಾರ, ಮಹಾ ಮಾನವ ಕುವೆಂಪು ಅವರು ಈ ಶತಮಾನಕಂಡ ಮಹೋನ್ನತ ವ್ಯಕ್ತಿತ್ವ. ಹೀಗೊಬ್ಬರು ನಮ್ಮ ನಡುವೆ ಇದ್ದರು ಇಂಥ ಇನ್ನೊಬ್ಬರನ್ನು ಈ ನಾಡು ಕಾಣಬೇಕಾದರೆ ಇನ್ನೆಷ್ಟು ಯುಗಬೇಕೊ'' ಎಂದಿರುವ ಎಚ್ಚೆಸ್ಕೆ ಅವರ ಮಾತು ಅರ್ಥಪೂರ್ಣ.


★





# ಶರಣ ಸಾಹಿತ್ಯ ಮತ್ತು ಜಾನಪದ

– ಪ್ರೊ. ಹೆಚ್.ವಿ. ವೀರಭದ್ರಯ್ಯ
ಸಂಪಾದಕರು, ಸಿದ್ಧಗಂಗಾ ಮಾಸ ಪತ್ರಿಕೆ
ಸಿದ್ಧಗಂಗಾಮಠ, ತುಮಕೂರು.

''**ಶ**ರಣಸಾಹಿತ್ಯ ಕಾಲದ ದೃಷ್ಟಿಯಿಂದ ಪ್ರಾಚೀನವಾಗಿರು ವಾಗಿರುವಂತೆ ಪ್ರಭಾವದ ದೃಷ್ಟಿಯಿಂದ ವ್ಯಾಪಕವಾಗಿದೆ. ಸಾಹಿತ್ಯದ ದೃಷ್ಟಿಯಿಂದ ಕ್ರಾಂತಿಕಾರಕವಾಗಿರುವಂತೆ, ಸಮಾಜದ ಉದ್ಧಾರದ ದೃಷ್ಟಿಯಿಂದ ಉದಾತ್ತವಾಗಿದೆ; ೧೨ನೇ ಶತಮಾನದಲ್ಲಿ ಕರ್ನಾಟಕ ಕಂಡ ಈ ಯುಗ ಅದ್ವಿತೀಯವಾದುದು. ಇಡೀ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಅಪೂರ್ವವಾದುದು. ಧರ್ಮ ತನ್ನ ಸಂಪ್ರದಾಯದ ಕಟ್ಟುಗಳನ್ನು ಕಿತ್ತೊಗೆದು ಸಾಮಾನ್ಯ ಜನತೆಯನ್ನು ಉದ್ಧರಿಸುವ ಪವಿತ್ರ ಶಕ್ತಿಯಾಯಿತು ಈ ಯುಗದಲ್ಲಿ.''[1]

ಶರಣ ಸಾಹಿತ್ಯ ಉದಯವಾದದ್ದೇ ಸಮಷ್ಟಿಕಲ್ಯಾಣದ ದೃಷ್ಟಿಯಿಂದ. ಶರಣರು ಮೂಲತಃ ಸಾಧಕರು. ಸಾಹಿತಿಗಳಾಗ ಬೇಕೆಂದು ಅಪೇಕ್ಷಿಪಟ್ಟವರಲ್ಲ, ಅವರು ಅನುಭಾವಿಗಳು. ಅವರು ರಚಿಸಿದ ಸಾಹಿತ್ಯ ಅನಾಯಾಸವಾಗಿ ಮೂಡಿಬಂದ ಪ್ರಾಸಾದಿಕ ವಾಣಿ. ಆತ್ಮಾನುಸಂಧಾನವೇ ಅವರ ಗುರಿಯಾಗಿತ್ತು. ಆ ಅನು ಸಂಧಾನದ ಅಂಗವಾಗಿ ಅನಿವಾರ್ಯವೆಂಬಂತೆ ಸಾಹಿತ್ಯ ಸೃಷ್ಟಿಯಾದದ್ದು ಒಂದು ವಿಸ್ಮಯ. ಆ ಸಾಹಿತ್ಯದ ಸೃಷ್ಟಿಯಾದರೋ ''ದಂದಣ ದತ್ತಣ''ವೆಂಬಂತಹುದಾಗಿ ಮಾತಿಲ್ಲದವರಿಗೆ ಮಾತುಕೊಟ್ಟದ್ದು. ಶರಣ ಸಾಹಿತ್ಯದ ಲೋಕ ಆಧ್ಯಾತ್ಮಿಕವಾದರೂ ''ಕರ್ತಾರನ ಕಮ್ಮಟ''ವನ್ನು ಮರೆತದ್ದಲ್ಲ. ನಾವು ಅಲ್ಲಿ ಕಾಣುವುದು ಅಪಾರವಾದ ಅನುಕಂಪೆ, ಜಗತ್ತನ್ನೆಲ್ಲಾ ದುಃಖದಿಂದ ಮುಕ್ತಗೊಳಿಸಬೇಕೆಂಬ ಬಯಕೆ. ಹೀನರನ್ನೂ ದೀನರನ್ನೂ, ದಲಿತರನ್ನೂ ದುಃಖಿಗಳನ್ನೂ ತನ್ನವರೆಂದು ಅಪ್ಪಿಕೊಳ್ಳುವ ಆತ್ಮೀಯತೆ. ಸ್ವತಂತ್ರ ವಿಚಾರ ವಿಮರ್ಶೆಯೊಡನೆ ವಿಶ್ವವ್ಯಾಪಕವಾದ ಲೋಕಕಾರುಣ್ಯ, ಸಮಾಜದ ಹುಳುಕನ್ನು ತಿದ್ದುವ ದಿಟ್ಟತನದೊಡನೆ, ಸತ್ಯ ಸ್ವರೂಪದ ಸಾಕ್ಷಾತ್ಕಾರವನ್ನು ಪಡೆಯುವ ಅಂತರ್‌ದೃಷ್ಟಿ, ಕವಿ ಹೃದಯದ ಭಾವನೆಯ ಆವೇಗ, ಅದನ್ನು ಅಭಿವ್ಯಕ್ತಗೊಳಿಸುವ ಕಾವ್ಯಶಕ್ತಿ – ಈ ಬಹುಮುಖವಾದ ಪ್ರತಿಭೆಯಿಂದ ಸಮನ್ವಿತವಾದುದು ಅವರ ವ್ಯಕ್ತಿತ್ವ, ಆದುದರಿಂದಲೇ ಅದು ಇಡೀ ಭಾರತದ ವಿವಿಧ ಭಾಗಗಳಿಂದ ಸಾಧಕರನ್ನು ಆಕರ್ಷಿಸಲು ಸಮರ್ಥವಾಯಿತು. ಅವರ ನೇತೃತ್ವದಲ್ಲಿ ಕರ್ನಾಟಕ, ಉದಾತ್ತ ಸಂಸ್ಕೃತಿಯ ಚಿತ್ರಗಳನ್ನು ಬಿತ್ತರಿಸಿ ತೋರುವ ರಂಗಸ್ಥಲವಾಗಿ ಪರಿಣಮಿಸಿತು.''[2]

ಧರ್ಮತತ್ವಗಳನ್ನು ಶರಣಸಾಹಿತ್ಯ ಪರಿಣಾಮಕಾರಿಯಾಗಿ ಜನಮನಕ್ಕೆ ಮುಟ್ಟಿಸಿದ ಶಕ್ತಿಯುತವಾದ ಮಾಧ್ಯಮ. ನಮ್ಮ ಸಂಸ್ಕೃತಿಯ ಬೆನ್ನೆಲುಬೇ ಧರ್ಮ. ಶರಣರಿಗಿಂತಲೂ ಧರ್ಮವೆಂಬುದು ಕೇವಲ ಗುರು-ಲಿಂಗ-ಜಂಗಮಕ್ಕಷ್ಟೇ ಸೀಮಿತವಾಗಿರಲಿಲ್ಲ. ಉಡುವ, ಉಣ್ಣುವ, ನುಡಿವ, ನಡೆವ, ನೋಡುವ ಕೇಳುವದಷ್ಟೇ ಆಗಿರದೆ ಆಚರಣೆಗೆ ಅಳವಡುವುದಾಗಿತ್ತು. ಜೀವನದ ಎಲ್ಲ ಆಚಾರ ವ್ಯವಹಾರಗಳಿಗೆ ವ್ಯಾಪಿಸಿತ್ತು. ಇಹಪರಗಳೆಂದರೆ ಸಮನ್ವಯ ಸಿದ್ಧಾಂತ ಅದು. ಜೀವನದಲ್ಲಿ ಹಾಸು ಹೊಕ್ಕಾಗಿತ್ತು. ''ಜನಪದ ಸಾಹಿತ್ಯಕ್ಕೆ ಕಾರಣ ಕರ್ತರಾದ ಹಳ್ಳಿಯ ಜನತೆಯ ವಿಷಯಕ್ಕಂತೂ ಈ ಮಾತು ಇನ್ನೂ ಹೆಚ್ಚಾಗಿ ಅನ್ವಯಿಸುತ್ತದೆ''[3]. ಧರ್ಮ ಮತ್ತು ಜೀವನ ಶರಣರಿಗಾಗಲೀ, ಜನಪದರಿಗಾಗಲೀ ಬೇರೆ ಬೇರೆಯಲ್ಲ. ಒಂದನ್ನು ಬಿಟ್ಟು ಮತ್ತೊಂದಿಲ್ಲ. ಅದು ಅವರ ಜೀವನ ಧ್ಯೇಯ. ''ಲಿಂಗ ಮೆಚ್ಚಿ ಅಹುದಹು ದೆನ್ನು''ವಂತೆ ಬಾಳುವ ದೃಷ್ಟಿ ಅವರದು. ಆದುದರಿಂದಲೇ ''ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು'' ಎನ್ನುವಂತಾದುದು ಶರಣಸಾಹಿತ್ಯದಲ್ಲಿ ಜಾನಪದ.

ಏಕೆಂದರೆ ''ಶಿವಶರಣ ಸಾಧು-ಸತ್ಪುರುಷರ ಪಾದಧೂಳಿ ಯಿಂದ ಕನ್ನಡ ನಾಡು ಪಾವನವಾಗಿದೆ. ಇವರ ಪವಾಡಗಳನ್ನೂ, ಲೀಲೆಗಳನ್ನೂ ಕಂಡು ಕೇಳಿದ ಜನಪದವು ಇವರನ್ನು ಹಾಡಿ ಕೊಂಡಾಡುತ್ತ ಬಂದಿದೆ. ಸದಾಚಾರ ಸಂಪನ್ನರಾದ ಶಿವಶರಣರ ಪ್ರಭಾವವು ಜನತೆಯ ಮೇಲೆ ಬಹಳವಾಗಿದೆ. ಶಿವಶರಣರ ವಿಷಯ ವನ್ನು ಕುರಿತಂತೆ ಜಾನಪದ ಸಾಹಿತ್ಯವು ಅಪಾರವಾಗಿದೆ''.[4]

ಶರಣಸಾಹಿತ್ಯದಲ್ಲಿ ಜಾನಪದ ಅರಳಿದ್ದು ಹತ್ತುಹನ್ನೊಂದು ಬಗೆಯಲ್ಲಿ. ಕೋಲಾಟ, ಲಾವಣಿ, ಗೀಗೀ ಪದ, ಬಂಡಿಯ ಪದ, ಬೀಸುವ, ಕುಟ್ಟುವ ಹಾಡುಗಳು, ಗಾದೆ, ಒಗಟು, ಹಂತಿಪದಗಳು ಇತ್ಯಾದಿಯಾಗಿ. ಅವುಗಳಲ್ಲಿ ತ್ರಿಪದಿಗಳದೇ ಸಿಂಹಪಾಲು. ಇಲ್ಲಿ ಒಂದು ಮಾತನ್ನು ಗಮನಿಸಬಹುದೆಂದು ಕಾಣುತ್ತದೆ. ಶರಣರು ರಚಿಸಿದ ಸ್ವರವಚನಗಳಾಗಲೀ, ತ್ರಿವಿಧಿಗಳಾಗಲೀ ಜನಪದರಿಗೆಂದೇ ಸೃಜನ ಗೊಂಡವಿರಬೇಕೆಂದು ಭಾವಿಸುವುದು ತಪ್ಪಾಗಲಾರದೇನೋ!

೧. ಕರ್ನಾಟಕದ ಸಂಸ್ಕೃತಿಯ ಸಮೀಕ್ಷೆ – ಡಾ॥ ಎಚ್. ತಿಪ್ಪೇರುದ್ರಸ್ವಾಮಿ – ಪುಟ ೩೪೦
೨. ಅದೇ ಪುಟ ೩೪೧
೩. ಕರ್ನಾಟಕದ ಸಂಸ್ಕೃತಿಯ ಸಮೀಕ್ಷೆ – ಡಾ॥ ಎಚ್. ತಿಪ್ಪೇರುದ್ರಸ್ವಾಮಿ – ಪುಟ ೪೩೬
೪. ಕನ್ನಡ ಜಾನಪದ ಗೀತೆಗಳು – ಡಾ॥ ಬಿ.ಎಸ್. ಗದ್ದಿಗೆಮಠ – ಪುಟ – ೧೬

*ಶರಣರ ನೆನೆದಾರೆ ಸರಗೀಯ ಇಟ್ಟಾಂಗ*
*ಅರಳಮಲ್ಲೀಗೆ ಮುಡಿದಾಂಗ । ಕಲ್ಯಾಣ*
*ಶರಣರ ನೆನೆಯೊ ನನ ಮನವೆ ॥*

ಎಂದು ಜನಪದ ಕವಿ ಕಲ್ಯಾಣದ ಶರಣರನ್ನು ನೆನೆದಿದ್ದಾನೆ. ಕಲ್ಯಾಣದ ಶರಣರನ್ನು ನೆನೆಯುವುದೆಂದರೆ ಅವನಿಗೆ ಎಲ್ಲಿಲ್ಲದ ಹಿಗ್ಗು. ತನ್ನ ಮನಸ್ಸು "ಅನ್ಯ ವಿಷಯಕ್ಕೆಳಸದಂತೆ",

*ಲಿಂಗವ ನೆನೆ ಮನವೆ ಜಂಗಮವ ನೆನೆ ಮನವೆ*
*ಲಿಂಗ ಜಂಗಮವ ನೆನೆ ಮನವೆ ॥ ಕಲ್ಯಾಣದ*
*ಕಲ್ಯಾಣದ ಲಿಂಗ ಜಂಗಮವ ನೆನೆ ಮನವೆ ॥*

ಎನ್ನುತ್ತ ಮನವನ್ನು – ಮರ್ಕಟ ಮನಸ್ಸನ್ನು – ಶಿಕ್ಷಣಕ್ಕೊಳಪಡಿಸುತ್ತಾನೆ; ಸಾಂಸ್ಕೃತಿಕಯುತವನ್ನಾಗಿಸುವ ಪ್ರಯತ್ನ ಮಾಡುತ್ತಾನೆ. "ಮುಂದು ಜಾವದೊಳೆದ್ದು ಲಿಂಗದಂಘ್ರಿಯ ನೆನೆವ" ಪ್ರಭು ವಾಣಿಯನ್ನು ಸ್ಮರಣೆಗೆ ತರುತ್ತಾನೆ. ಅಷ್ಟೇ ಅಲ್ಲ, ಗುರು ಹಿರಿಯರನ್ನೂ ಬೆಳಗಾಗಿ ಎದ್ದು ನೆನೆಯುವುದುಂಟು :

*ಅತ್ತೆ ಮಾವಗೆ ಶರಣು ಮತ್ತೆ ಗುರುವಿಗೆ ಶರಣು*
*ಮತ್ತೊಂದು ಶರಣು ಬಸವನಿಗೆ । ಎನ್ನುತ*
*ನಾ ಬಗ್ಗಿದೆ ಮನೆಯ ಕೆಲಸಕ್ಕೆ ॥*

ಸದಾಚಾರ, ಗುರುಹಿರಿಯಲ್ಲಿ ವಿಧೇಯತೆ, ಬಸವ ಸ್ಮರಣೆಯ ಮೂಲಕ ಕಾಯಕಕ್ಕೆ ತೊಡಗುವುದರಲ್ಲಿ ಜೀವನದ ಅರ್ಥವಂತಿಕೆಯನ್ನು ಕಾಣುವುದು ಜನಪದರ ಸಂಸಾರ ಸಂಹಿತೆಯೇ ಆಗಿದೆ. ಬಸವಣ್ಣನಂತೂ ಜನಪದರ ಅಭಿಮಾನದ ದೇವರು. ಅವನನ್ನು ಎಷ್ಟು ಹಾಡಿದರೂ, ಕೊಂಡಾಡಿದರೂ ಅವರಿಗಿಲ್ಲ ತೃಪ್ತಿ :

*ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೋ*
*ಕರುಣೆ ಕಲ್ಯಾಣ ಬಸವಣ್ಣ । ಶಿವಲಿಂಗ*
*ಕಡೆತನಕ ಕಾಯೋ ಅಭಿಮಾನ ॥*

ಎಂದು ಬೇಡುತ್ತಾರೆ. ಬಸವಣ್ಣನಿಗಿಂತ ಕರುಣೆಯನ್ನು ಇನ್ನೆಲ್ಲಿ ಕಾಣುವುದು? "ಅಪ್ಪನು ಮಾದಾರ ಚೆನ್ನ ಬೊಪ್ಪನು ಡೋಹಾರಕಕ್ಕ' ನೆಂದ ಆ ಮಹಾಕಾರುಣ್ಯ ಶೀಲನನ್ನು "ಶಿವಲಿಂಗ"ವೆಂದೇ ಅಭಿನ್ನವಾಗಿ ಕಂಡ ಜಾನಪದರು ದಾರ್ಶನಿಕರೇ ಆಗಿದ್ದಾರೆ. ವಿನಯ, ಸ್ವಾಭಿಮಾನಿಗಳೇ ಬಸವಣ್ಣನವರಲ್ಲಿ ಎದ್ದು ಕಾಣುವ ಸದ್ಗುಣಗಳು. ಅಭಿಮಾನವನ್ನೇ ಬೇಡುವ ಜನಪದರ ಜೀವನ ಸೃಷ್ಟಿಯೂ ಅಷ್ಟೇ ಅಭಿಮಾನಾರ್ಹವಾಗಿದೆ. ಬಸವಣ್ಣನವರನ್ನು ಜನಪದ ಕವಿಗಳು ವರ್ಣಿಸುವಲ್ಲಿ ಅದೆಂಥ ಸೊಗಸಿದೆ ಕೇಳಿ :

*ಮಲ್ಲಿಗೆ ಇದ್ದಾಗ ಮುಳ್ಯಾಕೆ ಮುಡಿಯುವೆ*
*ಕಲ್ಯಾಣದೊಳಗೆ ಬಸವಣ್ಣನಿರುವಾಗ । ಕಲ್ಲಿಗ್ಯಾಕೆ*
*ಕೈಯಿ ಮುಗಿಯುವೆ ॥*

ಎನ್ನುತ್ತದೆ. ಮಲ್ಲಿಗೆ ಹೂವಿಗೆ ಬಸವಣ್ಣನನ್ನು ಹೋಲಿಸಿರುವುದರಲ್ಲಿರುವ ಔಚಿತ್ಯ, ಕಲ್ಲಿಗ್ಯಾಕೆ ಕೈಯ ಮುಗಿಯುವೆ ಎಂಬಲ್ಲಿರುವ ವೈಚಾರಿಕತೆ ಗಮನಾರ್ಹವಲ್ಲವೆ? ಬಸವಣ್ಣ ಮಾಡಿದ್ದಾದರೂ ಏನು? ಜನಪದಕ್ಕಾಗಿ,

*ಉತ್ತಿ ಬಿತ್ತುವ ಮಂತ್ರ ಬಿತ್ತಿ ಬೆಳೆಯುವ ಮಂತ್ರ*
*ಸತ್ಯ ಶಿವಮಂತ್ರ ನಿನ್ನೆಸರು । ಬಸವಯ್ಯ*
*ಮರ್ತ್ಯದೊಳು ಮಂತ್ರ ಜೀವನಕ್ಕೆ ॥*

ಎಂಬಂಥ ಆಚರಣೆಗೆ ಸಿಲುಕದಂಥ, ಅನುಷ್ಠಾನ ಯೋಗ್ಯವಾದ ಜನಪದರೆಲ್ಲ ಅನುಸರಿಸುವಂಥ ಜೀವನ ಮಾರ್ಗವನ್ನು, "ಮರ್ತ್ಯದೊಳು ಮಂತ್ರವನ್ನು". ಆ ಮಂತ್ರ ಕನ್ನಡದಲ್ಲಿ ರಚಿತವಾದದ್ದು. ಅದೂ ಉತ್ತುವಾಗ, ಬಿತ್ತುವಾಗ ಜಪಿಸುವಂಥ ಸತ್ಯ ಸರಳ ಮಂತ್ರ – ಅದೇ ದುಡಿಮೆ ಎಂಬ ಮಂತ್ರ; ಶ್ರಮಜೀವನದ ಮಂತ್ರ. ಇಂದಿಗೂ ಪ್ರಸ್ತುತವಾಗುವಂಥ ಮಂತ್ರ. ಅಷ್ಟೇ ಅಲ್ಲ, ಬಸವಣ್ಣ –

*ಕಾಯಕವ ಕಲಿಸುದಕ ನಾಯಕನು ಬಸವಯ್ಯ*
*ಜೀಯ ಹೊಸಮತಕೆ ಶಿವಭಕ್ತಿ ॥ ಸಾರುದಕೆ*
*ರಾಯ ಜೀವನದ ಹೊಸ ಗುಡಿಗೆ ॥*

"ನಾಯಕ"ನಾದ ಬಸವಣ್ಣ ಜನಪದರ ಕಣ್ಣಿನಲ್ಲಿ "ಕಾಯಜೀವನ"ವನ್ನೂ "ಭಕ್ತಿಪಕ್ಷ"ವನ್ನು ಕಂಡರಿದವನು. ಕಾಯಕ ಕೇವಲ ಸ್ವಾರ್ಥಕ್ಕೆ ಮಾಡುವ ಕೆಲಸವಲ್ಲ, ವ್ಯಕ್ತಿಯಲ್ಲ. ಸಮಷ್ಟಿಗಾಗಿ ಅರ್ಪಿಸಿಕೊಳ್ಳುವ ತ್ಯಾಗವೆಂಬುದನ್ನು ಕಲಿಸಿಕೊಟ್ಟವನು ಬಸವಣ್ಣ. ಪರಹಿತ ದೃಷ್ಟಿಯುಳ್ಳಾತನೇ ನಾಯಕ ತಾನೆ?

*ದಾಸೋಹಿ ಬಸವಣ್ಣ ದಾಸೋಹ ಕಲಿಸಿದನು*
*ದೇಶ ದೇಶೆಲ್ಲ ಕೇಳುತಲಿ । ಹೊಸಮಾತ*
*ಕೂಗಿದವು ವೇದ ಹುಸಿಯೆಂದು ॥*

ದಾಸೋಹ ಅರ್ಪಣಾಮಾರ್ಗ, ದಾನದಂಥಲ್ಲ, ದಾನದಲ್ಲಿ 'ಕರ್ತೃ'ಭಾವವಿರುತ್ತದೆ. ದಾಸೋಹದಲ್ಲಿ 'ಅನುಭಾವ'ವಿರುತ್ತದೆ. ಜನಪದರಿಗೆ 'ದಾಸೋಹ', ಹೊಸ ಮಾತಾಯಿತು.

*ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ*
*ಸುಳಿದು ಸೂಸುವ ವಾಯು ನಿಮ್ಮ ದಾನ.*
*ನಿಮ್ಮ ದಾನವನುಂಡು ಅನ್ಯರ ಹೊಗಳುವ*
*ಕುನ್ನಿಗಳನೇನೆಂಬೆ ರಾಮನಾಥ.*

ಸಮಾಜ ಸುಧಾರಣೆಯಲ್ಲಿ ಬಸವಣ್ಣನ ಮಾತು,

*ನೆಲೆಯಾತು ನಿತ್ಯ ಜನಪದಕೆ !*
*ಹೊಲೆಯ ಮಾದಿಗರೆಂಬ ಬಲೆಯಾತ ಕಿತ್ತೊಗೆದ*
*ಭಲರೆ ಬಸವಯ್ಯ ಬಸವರಸ ನಿನ್ನುಸುರು*
*ನೆಲೆಯಾತು ನಿತ್ಯ ಜನಪದಕೆ ॥*

ಎಂಬುದು ಜನಪದರ ದೃಢನಿರ್ಧಾರ. ಅಲ್ಲದೆ,

*ಬಸವ ಭಕ್ತಿಯ ಬೀಜ ಮುಕ್ತಿಯ ತೇಜ*
*ಬಸವ ಕಾಯಕದ ಗುರುಬೀಜ, ಶಿವಮತಕೆ*
*ಬಸವ ಓಂಕಾರ ಶಿವನಾಮ ॥*





ಎಂದಾದ 'ಭಕ್ತಿ ಭಂಡಾರಿ', 'ಸಮಗ್ರಕ್ರಾಂತಿಯ ಮೂಲಪುರುಷ' ಮಾಡಿದ ಕ್ರಾಂತಿಯೆಂಥಹುದು?

*ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ*
*ಚೆಲ್ಲಿದನು ತಂದು ಶಿವಬೆಳಕ । ನಾಡೊಳಗೆ*
*ಸೊಲ್ಲೆತ್ತಿ ಜನವು ಹಾಡುವುದು*

ಎಲ್ಲೆಲ್ಲು "ಶಿವಬೆಳಕ" ಚೆಲ್ಲಿದ ಕ್ರಾಂತಿ ಬಸವಣ್ಣ ಮಾಡಿದ್ದು. ಶಿವನ ಬಳಿಗೆ ಜನತೆಯನ್ನೊಯ್ಯಲಿಲ್ಲ. ಜನತೆಯ ಬಳಿಗೇ ಶಿವನನ್ನು ಕರೆತಂದು ಶಿವಬೆಳಕು ಚೆಲ್ಲಿದ. ಅದಕ್ಕೆಂದೇ "ಸೊಲ್ಲೆತ್ತಿ" ಜನ ಹಾಡಿತು. ಅಂದೂ ಹಾಡಿತು, ಇಂದೂ ಹಾಡ ಬೇಕಾಗಿದೆ. ಇತ್ತೀಚೆಗೆ ಜನಪದ ಕಂಡಿರುವ ಎಲ್ಲ ಕ್ರಾಂತಿಗಳ ಫಲವನ್ನನುಭವಿಸಿಯೂ 'ಶರಣರು ಮಾಡಿದ ಕ್ರಾಂತಿ'ಯನ್ನು ಮತ್ತೊಮ್ಮೆ ಕಾಣಬೇಕಾಗಿದೆ. ಹೃದಯವಂತಿಕೆಯ ಆ ಕ್ರಾಂತಿಯೆಲ್ಲಿ? ಕೇವಲ ಪಂಚತಾರಾ ಹೋಟೆಲುಗಳಿಂದ ಮೂಡಿ ಬರುವ ಇಂದಿನ ಕ್ರಾಂತಿಗಳೆಲ್ಲಿ? "ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ"ವಾಗಬೇಕಲ್ಲವೆ?

ಕಾಯಕ, ದಾಸೋಹಗಳು ಶರಣ ಸಂಸ್ಕೃತಿಯ ಎರಡು ಮುಖ್ಯ ಮೌಲ್ಯಗಳು. ಶರಣ ಸಾಹಿತ್ಯದಲ್ಲಿ ಇವು ಪ್ರತಿಪಾದಿತವಾಗಿರುವುದು ಸರ್ವವೇದ್ಯ. ಜನಪದವೂ ಸಹ ಇವುಗಳನ್ನು ಉಚ್ಚಮಟ್ಟದಲ್ಲಿ ಗೌರವಿಸಿದೆ. ಗುರು-ಲಿಂಗ-ಜಂಗಮದಷ್ಟೇ ಗೌರವಾನ್ವಿತವಾದುದು ಕಾಯಕವೆಂಬುದನ್ನು ಜನಪದ ಎತ್ತಿ ಹಿಡಿದಿದೆ.

ಮೇದರ ಕೇತಯ್ಯ ಬುಟ್ಟಿ ಮಾಡಿ ಜೀವಿಸುತ್ತಿದ್ದ ಸರಳ, ಸಾಮಾನ್ಯ ಒಬ್ಬ ಶರಣ. ಒಮ್ಮೆ ಬುಟ್ಟಿ ಮಾಡಲು ಬಿದಿರು ತರುವುದಕ್ಕಾಗಿ ಕಾಡಿಗೆ ನಡೆದ. ಒಂದು ಕಡೆ ಬಿದಿರು ಕಡಿದಾಗ ಬಂಗಾರ ಬಂತು.

*ಬಂಗಾರ ಹುಳ ಹತ್ತಿ ಭಂಗವಾಗಿದೆ ಬಿದಿರು*
*ಕಂಗಳಿಗೆ ಬೇಡ ಹೊಲೆಯೆಂದ । ದಾಸೋಹ*
*ಸಂಗ ಜೋಡಣೆಗೆ ಕುಂದೆಂದ ॥*

'ಅಪರಿಗ್ರಹ' ಕಾಯಕದ ಲಕ್ಷಣ. ಅನ್ಯರಿಂದ ಬಂದುದನ್ನು ಕಾಯಕ ಒಪ್ಪದು. "ಕಾರೆಯ ಸೊಪ್ಪಾದಡೂ ಕಾಯಕದಿಂದಲೇ ಬರಬೇಕು; ಸತ್ಯಶುದ್ಧವೆನಿಸಬೇಕು ।" ಕೇತಯ್ಯನಿಗೆ ಬಂಗಾರ ಹುಳವಾಗಿ ಕಂಡಿತು. ಕಾಯಕಕ್ಕೆ ಅಶುದ್ಧವಾಯಿತು. ಮುಂದೆ "ಮಳುಮಳಿಸಿ ತಿಳಿದ ಹೊಲಿಯೆಂದು". ಕೊನೆಗೊಮ್ಮೆ ಒಂದು ಕಡೆ ಬಿದಿರು ಕಡಿದಾಗ ಕಾಲು ಜಾರಿ ಕೆಳಗೆ ಬಿದ್ದ. ದಸಿಯೊಂದು ಎದೆಗೆ ನಾಟಿ ರಕ್ತ ಚಿಮ್ಮಿತು. ನೋವಿನಲ್ಲೇ ಮನೆಗೆ ಬಂದ. ಸತಿ ಸಾತವ್ವ ದುಃಖಿತಳಾದಳು. ಆದರೆ ಕೇತಯ್ಯ ಪತ್ನಿಗೆ ಹೇಳಿದ : ಬೇಗ ದಾಸೋಹ ಮುಗಿಸೋಣ ಎಂದು. ಕಾಯಕದ ಮೇಲೆ ಆಶೆಯಿಟ್ಟು "ಹಾರದಿರು ಪಡುಗಡಲ ಏರಿ ಇಳಿಯುವ ರವಿಯೆ" ಎನ್ನುತ್ತ ಜಂಗಮ ದಾಸೋಹ ಮುಗಿಸಿದ ಅನಂತರ ಸಾತವ್ವನನ್ನು ಕರೆದು 'ಎದೆಗೆ ನಾಟಿದ ದಸಿ ಕೀಳು, ಕಿತ್ತಾಗ ಪ್ರಾಣ ಹೋಗಬಹುದು, ಅದಕ್ಕಾಗಿ ದುಃಖಬೇಡ, ಕಾಯಕ ಸಂದಿದೆ' ಎಂದ. ಸಾತವ್ವ ದಸಿ ಕಿತ್ತಳು. ಕಾಯಕವೆ ಶಿವಯೋಗವೆಂದು ನಂಬಿದ್ದ "ಶಿವಯೋಗ ರವಿಯು ಮುಣುಗಿದನು". ಪತ್ನಿಯ ದುಃಖ ಹೇಳ ತೀರದಾಯಿತು. ಆದರೂ ಆಗೆಂಥ ದುಃಖ !

*ಪತಿಯು ಲಿಂಗಾಗಿದ್ದ ಸತಿ ಶರಣನಾಗಿದ್ದ*
*ರತುನ ಕಾಯಕವೆ ಶಿವಪೂಜೆ । ಇಂದ್ಹೋತು*
*ಜನನೇಕೆ ಇನ್ನು ಬಾಳುದಕೆ ॥*

ಎನ್ನುತ್ತಾಳೆ ಸಾತವ್ವ, ರತ್ನಪ್ರಾಯವಾದ ಕಾಯಕ ಹೋಯಿತಲ್ಲಾ ಎಂದು ದುಃಖಿಸುತ್ತಾಳೆ ! ಈ ಪ್ರಸಂಗ ಅಜಗಣ್ಣ ಸತ್ತಾಗ ಮುಕ್ತಾಯಕ್ಕ ಅತ್ತ ಪ್ರಸಂಗದ ನೆನಪಾಗುವಂತಿದೆ. ಅಲ್ಲಿ ಗುರುವಿಗಾಗಿ, ಇಲ್ಲಿ ಕಾಯಕಕ್ಕಾಗಿ :

ಜನಪದ ಬೇಡಿದ್ದಾದರೂ ಏನನ್ನು? ಕೈಲಾಸವನ್ನೇ? ಶಿವನನ್ನೆ?

*ಬೇಡೆನಗೆ ಕೈಲಾಸ ನೀಡೆನಗೆ ಶಿವಭಕ್ತಿ*
*ಮಾಡುವೆನು ಸೇವೆ ಶಿವಮತಕೆ । ಶರಣರಿಗೆ*
*ನಾಡ ಕಾಯಕವೆ ಕೈಲಾಸ ॥*

ಅವರಿಗೆ ಕಾಯಕವೆ ಕೈಲಾಸವಾಯಿತು. ಸೇವೆ ಮಾಡುವುದೆ ಗುರಿಯಾಯಿತು, ಶಿವಭಕ್ತಿಯೆನಿಸಿತು. ಶರಣರ ದೃಷ್ಟಿಪರುಷದಿಂದ ಜನಪದ ಉದಾತ್ತ ಮೌಲ್ಯಗಳನ್ನು ತನ್ನದಾಗಿಸಿಕೊಳ್ಳುವಂತಾಯಿತು. "ಲಿಂಗಾಗ ಸಾಮರಸ್ಯವೆನ್ನುವುದು ಗೃಹಸ್ಥ ಜೀವನಕ್ಕೆ ವಿರುದ್ಧವಾದುದಾಗಲೀ ವಿಮುಖವಾದುದಾಗಲೀ ಅಲ್ಲ; ಈ ಜೀವನವನ್ನೇ ಆ ಜೀವನವನ್ನಾಗಿ ಪರಿವರ್ತಿಸುವ ಯೋಗ. ಅದಕ್ಕೆ 'ದಾಸೋಹಂ' ಎನ್ನುವ ಸಮರ್ಪಣ ಭಾವವೇ ಮೂಲ"[೩]. ಕೇತಯ್ಯ-ಸಾತವ್ವರ ಜೀವನದಲ್ಲಿ ಜಾನಪದ ಅದನ್ನು ಕಂಡಿದೆ.

"ಸತಿ ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎಂಬ ಶರಣವಾಣಿಯನ್ನು ತನ್ನದಾಗಿಸಿಕೊಂಡ ಶ್ರದ್ಧೆಯನ್ನಿಲ್ಲಿ ಕಾಣಬಹುದು :

*ಸತಿ ಪತಿ ಇದ್ದರೆ ಹಿತವಂತರಿರಬೇಕು*
*ಕುಂಬಾರದ್ಧುಳದ್ದಾಂಗೆ ಸಂಸಾರ ಸಾಗಿದರೆ*
*ಮುಂದೈತೆ ತಂಗಿ ಕೈಲಾಸ*

"ಇದ್ದು ಬದ್ಧನಾಗದೆ ಸುಳಿದು ಸೂತಕಿಯಾಗದೆ" ಇಹ-ಪರಗಳನ್ನು ಸಮನ್ವಯಿಸುವ ಸುವರ್ಣ ಮಾಧ್ಯಮವಾದ ಶರಣರ ಜೀವನ ಸಾಹಿತ್ಯ ಜನಪದಕ್ಕೆ ಆದರ್ಶವಾದುದರಲ್ಲಿ ಆಶ್ಚರ್ಯವೇನೂ ಇಲ್ಲ. "ಕುಂಬಾರದ್ಧುಳದ್ದಾಂಗೆ ಸಂಸಾರ" ಸಾಗಿಸುವ ಅಪೇಕ್ಷೆ ಅದಕ್ಕಿದೆ.

ಶರಣ ಸಿದ್ಧಾಂತದ ಮೂರು ಮುಖ್ಯ ಲಕ್ಷಣಗಳು- ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳು. ಅಷ್ಟಾವರಣವೆ ರೂಪ, ಪಂಚಾಚಾರವೆ ಪ್ರಾಣ, ಷಟ್‌ಸ್ಥಲವೆ ಆತ್ಮವೆನ್ನುತ್ತದೆ ಶರಣ ಸಿದ್ಧಾಂತ. ಶರಣ ಸಾಹಿತ್ಯ ಅದನ್ನೇ ವಿವಿಧ ರೀತಿಯಲ್ಲಿ ಪ್ರತಿಪಾದಿಸಿದೆ. ಜನಪದ ಸಾಹಿತ್ಯದಲ್ಲೂ ಅಷ್ಟಾವರಣಗಳು ಸಹಜವಾಗಿ ಅರಳಿರುವುದನ್ನು ಮನಗಾಣಬಹುದು :

೩. ವಚನಕಾರರ ದೃಷ್ಟಿಯಲ್ಲಿ ಸಂಸ್ಕೃತಿ – ಪರಿಶೀಲನೆ : ಜಿ.ಎಸ್. ಶಿವರುದ್ರಪ್ಪ – ಪುಟ ೩೩.

*ಶರಣೆಂಬೆ ಗುರುವಿಗೆ ಶರಣೆಂಬೆ ಶಿವನಿಗೆ*
*ಶರಣೆಂಬೆ ಶಿವನ ಮಡದಿಗೆ । ಗೌರಮ್ಮನಿಗೆ*
*ಶರಣೆಂದು ಕಲ್ಲ ಹಿಡಿದೇನ ॥*

ಎಂಬುದಾಗಿ ಗುರುವಿಗೆ ಶರಣೆನ್ನುತ್ತ ಕಾಯಕಕ್ಕೆ ಕೈ ಇಡುತ್ತದೆ. ಹಲವಾರು ರೀತಿಯಲ್ಲಿ ಗುರುಸ್ಮರಣೆ, ಗುರುಸ್ತುತಿ ಜಾನಪದದಲ್ಲಿ ವ್ಯಕ್ತವಾಗಿದೆ. ಲಿಂಗವನ್ನಂತೂ ಮನದುಂಬಿ ಹಾಡುತ್ತದೆ. ಲಿಂಗಯ್ಯ ಎಲ್ಲೆಲ್ಲೂ ಇದ್ದಾನೆ :

*ಹೂವಿನಾಗೆ ಹುದುಗ್ಯಾನ ಮಾಲ್ಯಾಗೆ ಮಲಗ್ಯಾನ*
*ಮೊಗ್ಗಾಗೆ ಕಣ್ಣ ತೆರೆದಾನ । ಲಿಂಗಯ್ಯನ*
*ನೋಡಟಿಗೆ ನಿದ್ದಿ ಬಯಲಾಗಿ ॥*

ಜಂಗಮದ ನೆನಪಂತೂ ಜಾನಪದದಲ್ಲಿ ನಿಚ್ಚಳವಾಗಿ ಕಾಣಬರುತ್ತದೆ. ಗುರು-ಲಿಂಗ-ಜಂಗಮದ ನೆನಪಿನಲ್ಲೇ ಜೀವನ ಸಾಗುತ್ತದೆ :

*ಲಿಂಗವ ನೆನೆದೇನೋ, ಜಂಗಮರ ನೆನೆದೇನೋ*
*ಲಿಂಗ ಜಂಗಮರ ನೆನೆದೇನೋ । ಕೈಲಾಸದ*
*ಶ್ರೀ ಗಂಗೆ ತಂಗವನ ನೆನೆದೇನೋ ॥*

ಎಂದು ಹಾಡುತ್ತದೆ. ಇಷ್ಟಲಿಂಗವನ್ನಂತೂ ಪ್ರಾಣಸಮಾನವಾಗಿ ಕಾಣಬೇಕೆನ್ನುವ ಜಾನಪದ ನಿಷ್ಠೆಯಿಲ್ಲದವರಿಗೆ ಇಷ್ಟಲಿಂಗವನ್ನು ಕೊಡಬೇಡವೆಂದು ಗುರುವನ್ನೇ ಬೇಡುವ ಚಿತ್ರ ಚೇತೋಹಾರಿಯಾದುದು :

*ಕಟ್ಟಿದ ಲಿಂಗವ ನೆಟ್ಟಗೂಟಕೆ ಹಾಕಿ*
*ನಿಟ್ಟಿಸದೆ ಮನೆಯ ಕೆಲಸವನು ।*
*ಭ್ರಷ್ಟರಿಗೆ ಎನ್ನ ಕೊಡಬೇಡ ॥*

ಎಂದು ಗುರುವಿನಲ್ಲಿ ಅರಿಕೆ ಮಾಡಿಕೊಳ್ಳುತ್ತದೆ. ಹಳ್ಳಿಯ ಹೆಂಗಸರಲ್ಲಿ ಸೀರೆಯ ಸೆರಗಿಗೆ ಲಿಂಗವನ್ನು ಕಟ್ಟಿ ಸ್ನಾನಮಾಡುವ ಪದ್ಧತಿಯಿದ್ದಂತೆ ಕಾಣುತ್ತದೆ. ಹೆಣ್ಣೊಬ್ಬಳು ಹಾಗೆ ಮಾಡಿದ ಸಂದರ್ಭದಲ್ಲಿ ಇಷ್ಟಲಿಂಗವನ್ನು ಬಿಟ್ಟು ಬೇರೊಂದು ಸೀರೆಯುಟ್ಟು, ಲಿಂಗ ಕಟ್ಟಿದ ಬಟ್ಟೆಯನ್ನು ಮಡಿವಾಳನಿಗೆ ಹಾಕಿದ ಸನ್ನಿವೇಶವೊಂದನ್ನು ಇಲ್ಲಿ ನೋಡಬಹುದು :

*ಗೌರಿ ತನ್ನ ಲಿಂಗವನ್ನು ಸೀರೆ ಸೆರಗಲಿ ಕಟ್ಟಿ*
*ಸೀರೆ ಮಾಸಿದರೆ ಅಗಸನಿಗೆ ಹಾಕುಂಬ । ಮಾರಿಗೆ*
*ಎನ್ನ ಕೊಡಬೇಡ ।*

ಎಂಬ ಲಿಂಗದ ಬಗ್ಗೆ ಇದ್ದ ಅಲಕ್ಷ್ಯವನ್ನು ಪರಿಣಾಮಕಾರಿಯಾಗಿ ಚಿತ್ರಿಸುವುದಲ್ಲದೆ ಪ್ರೀತಿಯಿಲ್ಲದವರಿಗೆ ಲಿಂಗ ಕೊಡುವುದು ಬೇಡ ಎಂದು ಪ್ರಾರ್ಥಿಸುವ ಚಿತ್ರವಿದೆ :

*ನಂಜನಗೂಡು ಚೆಂದ ನಂದಿಕೋಲು ಚೆಂದ*
*ಈಬೂತಿ ಇಕ್ಕುವರ ಹಣೆ ಚೆಂದ । ಲೋಕದಲಿ*
*ಲಿಂಗ ಕಟ್ಟುವರ ಎದೆ ಚೆಂದ ॥*

'ಕೂಡಲ ಸಂಗನ ಶರಣರಿಗೆ ನೊಸಲಿಗೆ ವಿಭೂತಿಯೇ ಶೃಂಗಾರ'ವೆಂಬ ಬಸವಣ್ಣನವರ ಮಾತೇ ಸರಳ ಸುಂದರವಾಗಿ ಮರುಹುಟ್ಟು ಪಡೆದಿದೆ ಜಾನಪದದಲ್ಲಿ. ಅಂತೆಯೇ,

*ಪಾದತೀರ್ಥವ ಸೇವಿಸಿ ಪಾವನಾಯಿತು ಜನುಮ*
*ರೋಮರೋಮೆಲ್ಲ ರವಿ ಚೆನ್ನ । ಗುರುಗಳ*
*ಪಾದದಲಿ ಕಂಡೆ ಪರಶಿವನ ॥*

ಎಂಬುದಾಗಿ ಪಾದೋದಕದ ಮಹತ್ವವನ್ನು ಬಿತ್ತರಿಸುತ್ತದೆ. ಗುರುಗಳ ಪಾದದಲ್ಲಿ ಪರಶಿವನಿದ್ದಾನೆಂದು ನಂಬಿದೆ ಜಾನಪದ;

*ಮುಗ್ಧ ಶರಣರ ಹಾಡು ಸಿದ್ಧಿ ಮಂತ್ರವು ನೋಡು*
*ಸಿದ್ಧಾಗು ಹಾಡ ಹಾಡುದಕೆ । ಎಲೆ ಜೀವ*
*ಶುದ್ಧಾಗಿ ಹೊಂದು ಶಿವಪದವ ॥*

ಎಂಬುದಲ್ಲದೆ ಶರಣ ಸಿದ್ಧಾಂತದಲ್ಲಿ ದುಡಿಮೆಯೇ ಮಂತ್ರವೆಂಬುದನ್ನು ಒತ್ತಿ ಹೇಳುತ್ತದೆ :

*ಉತ್ತುವ ಬಿತ್ತುವ ಮಂತ್ರ ಬಿತ್ತಿ ಬೆಳೆಯುವ ಮಂತ್ರ*
*ಸತ್ಯ ಶಿವಮಂತ್ರ ನಿನ್ದೆಸರು । ಬಸವಯ್ಯ*
*ಮರ್ತ್ಯದೊಳು ಮಂತ್ರ ಜೀವನಕೆ ॥*

ಕಾಯಕಕ್ಕೆ ಜಾನಪದ ವಿಶೇಷ ಭಕ್ತಿ ಗೌರವಗಳನ್ನೇ ಅರ್ಪಿಸುತ್ತದೆ. ಜಾನಪದ ಅನುಸರಿಸದ ಮಂತ್ರ ಕೇವಲ ಗುರು- ಲಿಂಗ- ಜಂಗಮಕ್ಕೆ ಮಾಡುವ ಔಪಚಾರಿಕ ಸಾಂಪ್ರದಾಯಿಕ ಪೂಜೆಯಲ್ಲ. ಜೀವನವನ್ನು ಯೋಗವನ್ನಾಗಿ ಯೋಗವನ್ನೇ ಜೀವನವನ್ನಾಗಿ ಕಂಡದ್ದು.

ಡಾ. ಬಿ.ಎಸ್. ಗದ್ದಗಿಮಠರ ಸಂಪ್ರಬಂಧ ''ಕನ್ನಡ ಜಾನಪದ ಗೀತೆಗಳು'' ಗ್ರಂಥದ ಅನುಬಂಧದಲ್ಲಿ ಸಂಗ್ರಹಿಸಿರುವ ಕಲ್ಯಾಣ ಬಸವಯ್ಯ, ಹರಳಯ್ಯ, ಮಡಿವಾಳ ಮಾಚಯ್ಯ, ಕಿನ್ನರಿ ಬೊಮ್ಮಯ್ಯ, ಮೇದರ ಕೇತಯ್ಯ, ಇಳಿಹಾಳ ಬೊಮ್ಮಯ್ಯ, ಹೂಗಾರ ಮಾದಯ್ಯ, ಜಾತಿಗರ ಚೌಡಯ್ಯ, ನೇಗಿಯ ಅಮುಗಯ್ಯ, ಕುಂಬಾರ ಗುಂಡಯ್ಯ, ಮಾದರ ಚೆನ್ನಯ್ಯನವರ ಹಂತಿಯ ಹಾಡುಗಳನ್ನು ಗಮನಿಸಿದಾಗ ಶರಣ ಸಾಹಿತ್ಯದಲ್ಲಿ ಜಾನಪದ ಹೇಗೆ ''ಸದ್ದುಗದ್ದಲವಿರದ'' ಮೌನ ಸೇವೆಯನ್ನು ಸಲ್ಲಿಸಿದೆ ಎಂಬುದು ತಿಳಿಯದಿರದು.

ಜಾನಪದದ ಶ್ರವ್ಯರೂಪದ ಜನಪ್ರಿಯ ಪ್ರಕಾರಗಳಲ್ಲಿ ಒಂದು ಲಾವಣಿ. ಶರಣ ಸಾಹಿತ್ಯದಲ್ಲಿ ಲಾವಣಿ ಹಾಡುಗಳೂ ಉಂಟು. ಕೇವಲ ನಿದರ್ಶನಕ್ಕಾಗಿ ಈ ಒಂದನ್ನು ಇಲ್ಲಿ ಉದಾಹರಿಸಲಾಗಿದೆ. ಗುರುವಿನ ಮಹತ್ವವನ್ನು ಹೇಳುವ ಈ ಲಾವಣಿ ಹೀಗಿದೆ :

*ಗುರು ಅಲಕ್ ನಿರಂಜನ್ ನಿರವಯ ನಿರ್ಗುಣ ನಿಷ್ಕಲನೆನುತಲ್ಲಾ ।*
*ಪರಿಪರಿ ಯೋಗಾಭ್ಯಾಸ ಕಲಿಸಿದ ಹರಿಹರರಿಗೆ ಗುರು ದೊರೆಯಲಿಲ್ಲಾ ।*
*ಗುರು ದಿಗಂಬರ ಸ್ವರೂಪನು, ಅಂತೂ ಭವಸಾಗರ ದಾಂಟಿಪುದು ಬಲ್ಲಾ ।*





*ಗುರು ಪರಬ್ರಹ್ಮ ಪರಾತ್ಪರ ಪರಮಾತ್ಮ ಪರಂಜ್ಯೋತಿಯಾಗಿ*
*ಮೆರೆಯುವನಲ್ಲಾ ।*
*ನೋಡುನೋಡು ಗುರು ಸತ್ಯಸಾಗರಾ ಆ ಗುರು ನಿತ್ಯ ನಿರಾಕಾರಾ ।*
*ನೋಡು ಗುರು ನಿರಹಂಕಾರಾ, ಗುರು ಮೃತ್ಯುಂಜಯ ಧೀರಾ ।*
*ಗುರು ಅಗಯ್ಯ ಅಗೋಚರ ಅಗಣಿತ ಅದ್ವಯ ಲೀಲಾಜಾಲವೆ*
*ಮಯವಾಗಿದೆಯಲ್ಲಾ.*

ಅಲಕ್ ನಿರಂಜನನಾದ ಗುರುವಿನ ಆಶ್ರಯದಲ್ಲಿ ಎಲೆಮರೆಯ ಹೂವಿನಂತೆ ಅರಳಿದರು ಅಸಂಖ್ಯಾತರು. ಒಂದು ಸಂಸ್ಕೃತಿ ಸಾಧಿಸಬಹುದಾದ ಅತ್ಯುನ್ನತವಾದ ಎತ್ತರವನ್ನು ಅಂತಹ ವ್ಯಕ್ತಿಗಳಲ್ಲಿ ಕಂಡುಕೊಳ್ಳುತ್ತೇವೆ ಎಂಬ ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರ ನುಡಿ ಯಥಾರ್ಥವೆನಿಸುತ್ತದೆ.

ಮದುವೆಯಲ್ಲಿ ಹಾಡುವ ಸೋಬಾನದ ಹಾಡುಗಳಲ್ಲಿ ಶರಣರನ್ನು ಸ್ಮರಿಸುತ್ತದೆ ಜಾನಪದ :

*ಸೋ ಅನ್ನು ಸಬುದವನು, ಯಾರು ಮಾಡ್ಯಾರು ಗುರುವೆ*
*ದೇವಗುರು ಚೆನ್ನಬಸವಣ್ಣ ಸೊಗಲದಾಗ*
*ಮಾದೇವನ ಮದುವೆ ಮಾಡಿದರ ॥ ಸೋ ॥*

ಗಾದೆಗಳು ವೇದಕ್ಕೆ ಸಮಾನವೆನ್ನುತ್ತಾರೆ. ಅಷ್ಟೇ ಅಲ್ಲ, ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂದೂ ಹೇಳುತ್ತಾರಲ್ಲವೆ? ಉದಾಹರಣೆಗಾಗಿ ಕೇವಲ ಒಂದನ್ನು ಗಮನಿಸೋಣ. ''ಶಿವಪೂಜೆಯಲ್ಲಿ ಕರಡಿಗೆ ಬಿಟ್ಟಂತೆ''. ಯಾವುದೇ ಕೆಲಸ ಮಾಡಬೇಕಾದರೂ ಮೂಲವನ್ನು ಮರೆಯಬಾರದಲ್ಲವೆ? ಕರಡಿಗೆಯಲ್ಲಿ ತಾನೆ ಇಷ್ಟಲಿಂಗವಿರುವುದು. ಅದನ್ನೇ ಬಿಟ್ಟು ಪೂಜೆಗೆ ಕುಳಿತರೆ ಹೇಗೆ?

ಧಾರ್ಮಿಕ ಜೀವನವನ್ನು ಕುರಿತ ಈ ಗಾದೆಗಳು ಶರಣ ಸಾಹಿತ್ಯ ಸಂಸ್ಕೃತಿಯಲ್ಲಿ ಅರಳಿರುವ ಅನುಭವದ ಹೂವಾಗಿರುವುದನ್ನು ಕಾಣಬಹುದು. ''ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು'', ''ಕೃಷಿಕೃತ್ಯ ಕಾಯಕ''ವೆಂಬ ಬಸವಣ್ಣನವರ ವಾಣಿಯನ್ನು ನೆನಪಿಗೆ ತರುತ್ತದೆ. ''ಲಿಂಗಕ್ಕೆ ಹೊಲೆಯಿಲ್ಲ, ಗಂಗೆಗೆ ಮಡಿಯಿಲ್ಲ''. ಲಿಂಗದೇಹಿ ಸದಾ ಶುಚಿ ಎಂಬುದನ್ನು ಒತ್ತಿ ಹೇಳುತ್ತದೆ. ''*ಶರಣನ ಗುಣ ಮರಣದಲ್ಲಿ ನೋಡು; ತ್ಯಾಗಿಯ ಗುಣ ಭೋಗದಲ್ಲಿ ನೋಡು*'', ''*ಅಳಿಯುವುದು ಕಾಯ, ಉಳಿಯುವುದು ಕೀರ್ತಿ*'', ''*ಯಾರಿಗೆ ಯಾರಿಲ್ಲ, ದಾರಿಗೆ ಸಂಗಾತಿಯಲ್ಲ*'', ''*ಆರಿಗಾದು ಇಲ್ಲ ಕೆಟ್ಟವಂಗೆ ಕೆಳೆಯಲ್ಲ*'' ಎಂಬ ಬಸವಣ್ಣನವರ ಮಾತು ನೇರವಾಗಿಯೇ ಜಾನಪದದಲ್ಲಿ ಮತ್ತೆ ಹುಟ್ಟಿ ಬಂದಿದೆ. ''ಹೊರಗೆ ಭಕ್ತಿ, ಒಳಗೆ ಕತ್ತಿ'', ''ತುದಿ ನಾಲಗೆ ಬೆಲ್ಲಂ ಭೋ ಹೃದಯದೊಳಗೆ ಕತ್ತರಿ'', ''ಚರ್ಮ ತೊಳೆದರೆ ಕರ್ಮ ಹೋದೀತೆ'', ''ತೊರೆವ ಮೀವಣ್ಣಂಗಳಿರಾ ತೊರೆಯಿಂ ಭೋ ಪರಧನವ'' ವಚನೋಕ್ತಿಯ ಮರು ರೂಪವಾಗಿದೆ. ''ಸಮುದ್ರದ ಉಪ್ಪು ಕಾಡಿನ ನೆಲ್ಲಿಕಾಯಿ'' – ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು ಎಂಬ ಅಲ್ಲಮಪ್ರಭುವಿನ ವಚನ ನೆನಪಾಗದೆ? ''ಲಿಂಗ ಹಿಡಿದ ಮೇಲೆ ಜಂಗಮದ ಹಂಗೇನು?'', ''*ನೂರಕ್ಕೊಬ್ಬ ದಾನಿ, ಸಾವಿರಕ್ಕೊಬ್ಬ ಶರಣ*'', *ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ*, ''*ಸಿದ್ದಂಗೆ ಊಟ, ಶಿವಂಗೆ ನೋಟ*'', ಇಲ್ಲಿ ವ್ಯಕ್ತವಾಗಿರುವ ಜಾನಪದದ ಅನುಭವ ಅಪಾರವಾದುದು.

ಒಗಟುಗಳೂ ಶರಣ ಸಂಸ್ಕೃತಿಯನ್ನು ಬಿತ್ತರಿಸುತ್ತವೆ. ಅದಕ್ಕೊಂದು ಉದಾಹರಣೆ – ಬಂಗಾರದ ಕರಡಿಗೆಯಲ್ಲಿ ಬೆಳ್ಳಿಯ ಲಿಂಗ'' – ಹಸಲಿನ ತೊಳೆಯ ಮತ್ತು ಅದರಲ್ಲಿರುವ ಬೀಜ ಎಂಬುದು ಉತ್ತರ.

ಕೋಲಾಟದ ಪದಗಳಲ್ಲಿ ಶರಣಧರ್ಮದ ಅಂಶಗಳಿರುವುದನ್ನು ಪರಿಶೀಲಿಸಬಹುದು.

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ನಾಯಕನಹಟ್ಟಿ ಒಂದು ಸುಪ್ರಸಿದ್ಧ ಶರಣಕ್ಷೇತ್ರ, ಗುರು ತಿಪ್ಪೇರುದ್ರಸ್ವಾಮಿ ನೆಲೆನಿಂತ ಧರ್ಮಭೂಮಿ. ಲೀಲಾಮೂರ್ತಿಯಾದ ತಿಪ್ಪೇಸ್ವಾಮಿಯನ್ನು ಜಾನಪದದಲ್ಲಿ ಕೋಲಾಟದ ಪದಗಳು ಕೊಂಡಾಡುತ್ತಿವೆ :

*ಕೋಲನ್ನ ಕೋಲನ್ನ ಕೋಲೆ । ಸಿರಿಗಂಧದ । ಕೋಲನ*
*ಕೋಲನ್ನ ಕೋಲೆ*
*ಹಟ್ಟೀನೆ ತಿಪ್ಪೇಶ ಸತ್ಯವುಳ್ಳನು ಕಣೆ*
*ಸತ್ತೆಮ್ಮೆ ಹಾಲ ಕರೆದಾನೆ । ತಿಪ್ಪೇಸ್ವಾಮಿ*
*ಹಟ್ಟಿ ಒಳ್ಳೇದೆಂದು ನೆಲೆಗೊಂಡ ॥ ಕೋಲನ್ನ ಕೋಲೆ*

ಮಾನೌಮಿ ಪದಗಳು ಜಾನಪದದ ಪ್ರಕಾರಗಳಲ್ಲಿ ಒಂದಾಗಿದ್ದು, ಶಾಲಾ ಚಿಣ್ಣರನ್ನು ಮಾಸ್ತರರೆನಿಸಿಕೊಂಡಾತ ಗ್ರಾಮದ ಮನೆಮನೆಗಳ ಮುಂದೆ ಕರೆದುಕೊಂಡು ಹೋಗಿ ಮಕ್ಕಳಿಂದ ಹಾಡಿಸುತ್ತಿದ್ದ ಸಂಪ್ರದಾಯವೇ ಮಾನೌಮಿ ಪದಗಳು. ಶರಣ ಸಂಸ್ಕೃತಿಯನ್ನು ಅಲ್ಲಿಯೂ ಗುರುತಿಸಬಹುದಾಗಿದೆ :

*ಶಿವಪೂಜೆಮಾಡ್ವಲ್ಲಿ ಬಲ್ಲಸುತನಾಗು ।*
*ಶಿವಸ್ತೋತ್ರ ಕೇಳ್ವಲ್ಲಿ ಗಿರಿರಾಜನಾಗು ॥*
*ಶಿವಶರಣ ಕಾಂಬಲ್ಲಿ ಸುರಪತಿಯೆ ಆಗು ।*
*ಶಿವನ ಕರುಣದಿ ಕೃಪೆಯನುಳ್ಳಾತನಾಗು ॥*

ಎಂದು ಹಾರೈಸುವ ಶಾಲಾ ಮಕ್ಕಳ ನುಡಿಗಳಲ್ಲಿ ಶಿವಪೂಜೆ, ಶಿವಸ್ತೋತ್ರ, ಶಿವಚರಣ, ಶಿವಕರುಣ ದೊರೆಯಲಿ ಎಂಬ ಸದ್ಭಾವನೆಯಿದೆ. ಅಂತೆಯೇ

*ನಾಯೆಂಬ ಅಕ್ಷರವನೊಂದು ಬಿಡಬೇಕು*
*ನೀನೆಂಬ ಅಕ್ಷರವ ಉಚ್ಚರಿಸಬೇಕು*
*ಇಂತೆಂಬ ನೀತಿಯನ್ನು ನೀವರಿಯಬೇಕು*
*ಶಂಭು ಪರಮೇಶ್ವರನ ದಯ ಬೇಕೇ ಬೇಕು ॥*

ಎನ್ನುವ ಹಾಡಿನಲ್ಲಿ ಅಹಂಕಾರ ತ್ಯಾಗದ ಅವಶ್ಯಕತೆಯನ್ನು ಹೇಳುವುದರ ಜೊತೆಗೆ 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ವಿನಯಾದರ್ಶನದ ಚಿತ್ರವಿದೆ.

*ಲಿಂಗವಂತರ ನೆನೆಯಬೇಕಣ್ಣ*
*ಮೂಡಲ ಕೆಂಪು ಹರಿಯುವ ಮುನ್ನ*
*ಎದೆಯ ಮೇಲಣ ಲಿಂಗವ ಪೂಜಿಪ*
*ಲಿಂಗವಂತರ ನೆನೆಯಬೇಕಣ್ಣ ॥*

ಚೆಳ್ಳಕೆರೆ ಬಳಿ ರಾತ್ರಿಯ ವೇಳೆ ಬೆಳದಿಂಗಳ ಬೆಳಕಿನಲ್ಲಿ ಕೋಲು ಹಾಕುತ್ತಿದ್ದ ತಂಡದವರು ಹಾಡುತ್ತಿದ್ದುದನ್ನು ಕಂಡು ವಿಚಾರಿಸಿದಾಗ ಹಾಡುತ್ತಿದ್ದವರು ಗೊಲ್ಲ ಸಮಾಜ ಬಂಧುಗಳೆಂದು ತಿಳಿದುಬಂದಿತು.

ಬೀಸುವ ಕಲ್ಲಿನ ಮೇಲೆ ಮೂಡಿಬಂದ ಶರಣ ಸಂಸ್ಕೃತಿಯ ಜಾನಪದ ಅಪಾರವಾಗಿದೆ. "ಕಲ್ಲೂಡಿ ನೆನೆದೇನ ಕಲ್ಯಾಣ ದಯ್ಯನ'' ಎಂದೇ ಬಾಯಿತೆರೆಯುವ ಗ್ರಾಮೀಣ ಗರತಿ "ಮಧ್ಯ ರಾತ್ರೀಲಿ ಎದ್ದು ಬೀಸವರ್‍ಯಾರೆ। ಸಿದ್ದರ ಮಡದಿ ಶಿವಶರಣೆ। ನೀಲಮ್ಮ ಮಧ್ಯರಾತ್ರೀಲಿ ಬೀಸ್ಯಾಳ'' ಎಂದು ನೀಲಾಂಬಿಕೆಯೂ ಬೀಸಿದಳು, ಕಾಯಕಕ್ಕೆ ಅರ್ಪಿಸಿಕೊಂಡಳು ತನ್ನನ್ನೂ ಎನ್ನುತ್ತದೆ.

ಜಾನಪದದ ದೃಷ್ಟಿ ಭವ್ಯವಾದುದು. ಅಲ್ಪಕ್ಕೆ ಆತುವರಿಯಲಿಲ್ಲ. ಅದು ಭೂಮವನ್ನೇ ಆರಾಧಿಸಿತು. ತನ್ನ ತಂದೆ ತಾಯಿ ಬಂಧು ಬಳಗ ತೌರು ಯಾರೆಂಬುದನ್ನು,

*ಹರನೆ ನನ್ನಯ ತಂದೆ ಗಿರಿಜೆ ನನ್ನಯ ತಾಯಿ*
*ಶರಣರೆ ನನ್ನ ಬಳಗವು। ಕೈಲಾಸ*
*ಗಿರಿಯೆ ಕಾಣಕ್ಕ ತೌರೂರು ॥*

ಎಂದು ದೃಢಪಡಿಸುತ್ತದೆ. ತಾನು ಜೀವನವನ್ನು ಪ್ರೀತಿಸುತ್ತದೆ. ಇಲ್ಲಿ ಸಲ್ಲುವಂತೆ ಬಾಳಲಾಶಿಸುತ್ತದೆ.

*ಮಾಳಿಗೆ ಮನೆಬೇಕು ಜೋಳಿಗೆ ಹಣಬೇಕು*
*ಬಸವಣ್ಣನಂಥಾ ಮಗು ಬೇಕು ॥ ನಮ್ಮನಿಗೆ*
*ನೀಲಮ್ಮನಂಥಾ ಸೊಸಿ ಬೇಕು ॥*

ಎಂದು ಸುಂದರ ಕೌಟುಂಬಿಕ ಜೀವನವನ್ನಾಶಿಸುತ್ತದೆ. ಅಲ್ಲದೆ ಇರುವಷ್ಟು ದಿನ "ಲೇಸೆನಿಸಿಕೊಂಡು'' ಬದುಕುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತದೆ.

*ಲೋಕದಾಗಿರುತನಕ ಬೇಕಾಗಿ ಇರಬೇಕು*
*ಸಾಕಾಗಿ ಶಿವನ ಸದರೀಗೆ ಹೋದಾಗ। ಎಲ್ಲಾರು*
*ಬರುತಾರ ಕಳಿಸಾಕ ॥*

*ಮಂದಿ ಮಕ್ಕಳೊಳಗ ಚೆಂದಾಗೊಂದಿರ ಬೇಕ*
*ಸಂದಿಯ ಶಿವನ ದಯದಿಂದ। ಹೋಗಾಗ*
*ಮಂದಿ ಬಾಯಾಗ ಇರಬೇಕ ॥*

ಎಂದು ಜೀವನದ ಸಾರ್ಥಕತೆ "ಇಲ್ಲಿ ಸಲ್ಲುವುದಾಗಬೇಕು'' ಎನ್ನುತ್ತದೆ. ಹಾಗೆಯೇ ಸಲ್ಲುವ ಬದುಕಾಗಬೇಕಾದರೆ "ಶೀಲ'' ಮುಖ್ಯ ಎಂಬುದನ್ನು ಸ್ಪಷ್ಟಪಡಿಸುತ್ತದೆ.

*ಸೀತಾಳೆ ಕೊಡಪಾನ ಶಿವಮೊಗ್ಗಿ ಪಾವುಡ*
*ಶೀಲವಂತವ್ವ ತನ್ನ ತಂಗಿ। ಬರುವಾಗ*
*ಶಿವ ತನ್ನ ಸದರ ಬಿಟ್ಟಳಿದಾನ ॥*

ಎನ್ನುವಲ್ಲಿ ಶೀಲವಂತರಿಗೆ ಶಿವನೂ ಎದ್ದು ನಿಂತು ಗೌರವ ತೋರಿಸುತ್ತಾನೆಂಬುದನ್ನು ಮನಗಾಣಿಸುತ್ತದೆ. ಕೊನೆಗೆ ಲಿಂಗಪೂಜೆಗೆ ಕುಳಿತಾಗ ಕರಸ್ಥಲದ ಜ್ಯೋತಿಯನ್ನು ಬೇಡುವುದಾದರೂ ಏನನ್ನು? –

*ಅಂಗೈಯ ಒಳಗೀನ ಲಿಂಗ ಮೂರುತಿಸ್ವಾಮಿ*
*ಮಂಗಳಾರತಿ ನಾ ಬೆಳಗಿ ಬೇಡುವೆನು*
*ಮಾರಾಯರ ಮುಂದೆ ಮರಣಾವ ॥*

ಮರಣವನ್ನು ಬೇಡುವಷ್ಟು ಎತ್ತರಕ್ಕೆ ನಡೆದಿದೆ ಜಾನಪದ. ಶರಣ ಸಂಸ್ಕೃತಿಯನ್ನು ಕಂಡುಂಡು. ಹುಟ್ಟು ಸಾವನ್ನು ಸಮದೃಷ್ಟಿಯಲ್ಲಿ ಕಾಣುತ್ತದೆ ಜಾನಪದ. ಕೇಳುತ್ತದೆ :

*ನಿದ್ದೆಗೆ ಮದ್ದುಂಟೆ ಬುದ್ದಿಗೆ ಕರೆಯುಂಟೆ*
*ಎದ್ದ ಬಲ್ಲವಗೆ ಕೇಡುಂಟೆ। ಶಿವರಾಯ*
*ಮುದ್ದುಂಟೆ ಜನನ ಮರಣಕ್ಕೆ ॥*

ಎಂದು ಪ್ರಶ್ನಿಸುತ್ತ ಹೌದು ಮದ್ದಿಲ್ಲ ಜನನ ಮರಣಗಳಿಗೆನ್ನುತ್ತದೆ.

*ದೇವರ ನೆನೆದಾರೆ ಸಾ ಹುಟ್ಟು ನಮಗಿಲ್ಲ*
*ಹಾವು ಕಚ್ಚಿದರೂ ಭಯವಿಲ್ಲ। ಸರ್ಪಾನ*
*ಹೆಡೆಯ ದಾಟಿದರೂ ಭಯವಿಲ್ಲ.*

ಎಂದು ಉತ್ತರಿಸುತ್ತದೆ; ಬದುಕಿಗೆ ಭರವಸೆಯನ್ನೀಯುತ್ತದೆ.

ಶರಣ ಧರ್ಮ ಶರಣಸಾಹಿತ್ಯದ ಮೂಲಕ ಉಳಿದು ಬಂದಿರುವಂತೆ, ಜಾನಪದದಲ್ಲಿಯೂ ಉಳಿದು ಬಂದಿರುವುದನ್ನಿಲ್ಲಿ ಪರಿಶೀಲಿಸಿದ್ದಾಯಿತು. ಪರಂಪರೆಯಿಂದ ಬಂದ ಜೀವನ ಆಸ್ತಿಯೂ ಜಾನಪದದ ಊರೆಗೋಲು. "ಒಂದು ಜನಾಂಗದ ಸಂಸ್ಕೃತಿಯ ಒರೆಗಲ್ಲು ಕಲಿತ ನಾಲ್ಕಾರು ಜನ ಪಂಡಿತರಲ್ಲ, ಕಲಿಯದ ಸಾವಿರಾರು ಜನ. ಜೀವನದ ಉದಾತ್ತ ಆದರ್ಶಗಳೂ ಸಾರ್ಥಕವಾಗಬೇಕಾದರೆ ಸಾಮಾನ್ಯ ಜನ ಜೀವನವನ್ನು ಅವು ಮುಟ್ಟಿ ಅವರ ಬಾಳನ್ನು ಹಸನುಗೊಳಿಸಬೇಕು. ಅಂತಹ ಸಾರ್ಥಕತೆಯನ್ನು ಕರ್ನಾಟಕ ಸಾಧಿಸಿಕೊಂಡಿದೆಯೆಂಬುದಕ್ಕೆ ಅದರ ಜನಪದ ಸಾಹಿತ್ಯವೇ ಸಾಕ್ಷಿಯಾಗಿದೆ'' ಎಂಬ ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರ ಹೇಳಿಕೆಯಂತೆ ಶರಣ ಸಾಹಿತ್ಯ ದಲ್ಲಿ ಜಾನಪದ ಮೈತೆರೆದುಕೊಂಡಿರುವುದನ್ನು ಕಾಣಬಹುದು.

ಶರಣ ಸಾಹಿತ್ಯದಲ್ಲಿ "ಜಾನಪದ'' ಎಂಬುದು ವ್ಯಾಪಕವಾದುದು. ಇಲ್ಲಿ ವಿಸ್ತಾರವಾದ ಹಿನ್ನೆಲೆಯನ್ನೇನೂ ನಿರ್ಮಿಸಿಕೊಳ್ಳದೆ, ಪ್ರಕೃತ ಸಂದರ್ಭಕ್ಕನುಗುಣವಾಗಿ ಕೆಲವು ಗೀತೆಗಳನ್ನು ನೋಡುವುದರ ಮೂಲಕ ಜನತೆಯ ಸಮಷ್ಟಿ ಮನಸ್ಸಿಗೆ ಒಂದು ನೋಟವನ್ನು ಗಮನಿಸಲಾಗಿದೆ.

*





## ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ಗೋವಿಂದರಾಜು ಅವರಿಗೆ 'ನಾಗರಿಕ ಸೇವಾ' ಪ್ರಶಸ್ತಿ

**ಯಾ**ವುದೇ ಕ್ಷೇತ್ರದಲ್ಲಿ ಸೇವೆ ಸಲ್ಲಿಸುವಾಗ ಶ್ರದ್ಧೆ, ಪ್ರಾಮಾಣಿಕತೆ, ಕಾಯಕನಿಷ್ಠೆ, ಸಭ್ಯತೆ, ದಕ್ಷತೆ, ಅನುಕಂಪ, ಕಳಕಳಿ ಇವೆಲ್ಲ ಗುಣಗಳನ್ನು ಮೈಗೂಡಿಸಿಕೊಂಡು ಆಚರಣೆಯಲ್ಲಿ ತಂದಾಗ ಯಶಸ್ಸು ಮತ್ತು ಕೀರ್ತಿ ತಾನಾಗಿಯೇ ಹುಡುಕಿಕೊಂಡು ಬರುತ್ತಿದೆ ಎಂಬುದಕ್ಕೆ ತುಮಕೂರು ಜಿಲ್ಲಾ ಪಂಚಾಯತಿಯಲ್ಲಿ ಉಪಕಾರ್ಯದರ್ಶಿಯಾಗಿ (ಅಭಿವೃದ್ಧಿ) ಸೇವೆಸಲ್ಲಿಸುತ್ತಿರುವ ಶ್ರೀ ಕುರುವೇಲು ತಿಮ್ಮನಹಳ್ಳಿ ಗೋವಿಂದರಾಜು ಅವರು ಒಂದು ಜ್ವಲಂತ ನಿದರ್ಶನ.

ಕರ್ನಾಟಕ ಸರ್ಕಾರ ಪ್ರಸ್ತುತ ವರ್ಷದಿಂದ ರಾಜ್ಯೋತ್ಸವದ ಶುಭ ಸಂದರ್ಭದಲ್ಲಿ ಕೊಡಮಾಡುತ್ತಿರುವ 'ನಾಗರಿಕ ಸೇವಾ ಪ್ರಶಸ್ತಿ'ಯನ್ನು ತಮ್ಮದಾಗಿಸಿಕೊಂಡ ಹೆಗ್ಗಳಿಕೆಗಾಗಿ ಪಾತ್ರರಾಗಿ ಎಲ್ಲರ ಪ್ರೀತಿ, ಗೌರವಕ್ಕೆ ಪಾತ್ರರಾಗಿದ್ದಾರೆ. ಆಡಳಿತ ಕ್ಷೇತ್ರದಲ್ಲಿ ಸೇವೆಸಲ್ಲಿಸುವವರಿಗೆ ಸ್ಫೂರ್ತಿಯಾಗಿದ್ದಾರೆ, ಮಾರ್ಗದರ್ಶಕರಾಗಿದ್ದಾರೆ.

'ಅಧಿಕಾರವೆಂಬುದು ಸೇವೆ ಮಾಡಲು ದೂರಕಿರುವ ಒಂದು ಸದಾವಕಾಶ' ಎಂದು ಭಾವಿಸಿರುವ ಶ್ರೀ ಗೋವಿಂದರಾಜು ಅವರು ನಮ್ರತೆ ಮತ್ತು ಸಭ್ಯತೆಯನ್ನು ಮೈಗೂಡಿಸಿಕೊಂಡಿದ್ದಾರೆ. 'ಅಧಿಕಾರಿ' ಎಂಬ ಅಹಂಕಾರದಿಂದ ಬಹುದೂರ ಉಳಿದಿದ್ದಾರೆ.

ಶ್ರೀ ಗೋವಿಂದರಾಜು ಅವರು ಹುಟ್ಟಿದ್ದು ನಾಗರಿಕತೆಯ ಸುಳಿಗಾಳಿಯೂ ಸುಳಿಯದ ಕುಗ್ರಾಮ ನೆಲಮಂಗಲ ತಾಲ್ಲೂಕು ಕುರುವೇಲು ತಿಮ್ಮನಹಳ್ಳಿಯಲ್ಲಿ. ಹಡೆದ ಪುಣ್ಯಜೀವಿಗಳು ತಂದೆ ನರಸಿಂಹಯ್ಯ, ತಾಯಿ ರಂಗಮ್ಮ. ಕಿತ್ತು ತಿನ್ನುವ ಬಡತನ. ಬಾಲಕ ಗೋವಿಂದರಾಜುವಿಗೆ ಹೊಟ್ಟೆಯ ಹಸಿವಿಗಿಂತ ಜ್ಞಾನದ ಹಸಿವೇ ಹೆಚ್ಚಾಗಿರುವುದನ್ನು ಕಂಡು ಹಡೆದವರಿಗೆ ದಿಕ್ಕೇ ತೋಚದಾಯಿತು. ಬಾಲಕನಿಗೆ ತನ್ನೊಳಗೆ ಕುಡಿಯೊಡೆಯುತ್ತಿದ್ದ ಓದಬೇಕೆಂಬ ಹಂಬಲ ಎಲ್ಲಿ ಕಮರಿ ಹೋಗುವುದೋ ಎಂಬ ಚಿಂತೆ. ಇಂತಹ ವಿಷಮ ಸಂದರ್ಭದಲ್ಲಿ ಕೈಬೀಸಿ ತನ್ನತ್ತ ಕರೆಯಿತು ಜ್ಞಾನ-ದಾಸೋಹಗಳ ಮಹಾಸಂಗಮವಾದ ಶ್ರೀ ಸಿದ್ಧಗಂಗಾಕ್ಷೇತ್ರ. ಗೋವಿಂದರಾಜು ಅವರ ಭವಿಷ್ಯದ ಹಾದಿ ಬದಲಾಯಿತು. ತ್ರಿವಿಧ ದಾಸೋಹ ಮೂರ್ತಿ, ಕಾಯಕಯೋಗಿ, ಮಾತೃಹೃದಯಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕೃಪಾಶೀರ್ವಾದದ ಮುಂಬೆಳಕಿನಲ್ಲಿ ಗೋವಿಂದರಾಜು ಅವರ ಜೀವನ ಉಜ್ವಲವಾಗತೊಡಗಿತು. ಅಕ್ಷರ ವಿದ್ಯೆಯ ಜೊತೆಗೆ ಸಮಯಪಾಲನೆ, ಶಿಸ್ತು, ಕಾಯಕನಿಷ್ಠೆ, ದಾಸೋಹ ಮಹತ್ವ ಹಾಗೂ ಲೋಕಾನುಭವವನ್ನು ತಮ್ಮದಾಗಿಸಿಕೊಂಡರು.

"ಪೂಜ್ಯ ಶ್ರೀ ಶ್ರೀಗಳವರು ಕರುಣೆಯಿಟ್ಟು ಶ್ರೀಮಠದಲ್ಲಿ ಆಶ್ರಯ ನೀಡದಿದ್ದರೆ, ಅವರ ದಿವ್ಯಾಶೀರ್ವಾದ ನನಗೆ ದೊರೆಯುತ್ತಿರಲಿಲ್ಲ. ನಾನು ನಿಜಕ್ಕೂ ಅದೃಷ್ಟವಂತ. ಕೆಲಸಕ್ಕೆ ಬಾರದ ಕಲ್ಲನ್ನು ಕೆತ್ತಿ ಎಲ್ಲರ ಗಮನವನ್ನು ಸೆಳೆಯುವಂತೆ ರೂಪಿಸಿದ ರೂವಾರಿ ಪೂಜ್ಯ ಶ್ರೀ ಶ್ರೀಗಳವರು. ಅವರ ಅಂತಃಕರುಣೆ, ಮಾತೃವಾತ್ಸಲ್ಯ ಅನುಪಮವಾದುದು'' ಎಂದು ಹೇಳುವಾಗ ಅವರ ಕಣ್ಣುಗಳಲ್ಲಿ ನೀರು ತುಂಬುತ್ತದೆ. ಶ್ರೀಮಠ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಮಾತನಾಡು ವಾಗ ಭಾವುಕರಾಗುತ್ತಾರೆ. ಮಾತು ಮೌನವಾಗುತ್ತದೆ. ನೂರು ಮಾತುಗಳಲ್ಲಿ ಹೇಳಬೇಕಾದದ್ದನ್ನು ಮೌನವೇ ಹೇಳುತ್ತದೆ.

ಶ್ರೀ ಗೋವಿಂದರಾಜು ಅವರಿಗೆ ಗ್ರಾಮೀಣರ ಬಗ್ಗೆ ಅಪಾರ ಕಳಕಳಿ. ಗ್ರಾಮೀಣರ ದುಃಖ ದುಮ್ಮಾನಗಳಿಗೆ ಬೇಗ ಸ್ಪಂದಿಸುವ, ಅವರ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ



ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ಈ ವರ್ಷದಿಂದ ಪ್ರಾರಂಭಿಸಿರುವ ''ನಾಗರೀಕ ಸೇವಾ ಪ್ರಶಸ್ತಿ''ಯನ್ನು ತುಮಕೂರು ಜಿಲ್ಲಾ ಪಂಚಾಯತ್ ಉಪಕಾರ್ಯದರ್ಶಿ ಶ್ರೀ ಗೋವಿಂದರಾಜುರವರಿಗೆ ಕರ್ನಾಟಕ ಸರ್ಕಾರದ ಉನ್ನತ ಶಿಕ್ಷಣ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರೂ ಆದ ಡಾ. ಜಿ. ಪರಮೇಶ್ವರ್‌ರವರು ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಶ್ರೀ ಕೆ. ಅಮರನಾರಾಯಣ, ಜಿಲ್ಲಾಧಿಕಾರಿ ಶ್ರೀ ಎಂಬಿ. ದ್ಯಾಬೇರಿಯವರು ಉಪಸ್ಥಿತರಿದ್ದರು.

ನಿಟ್ಟಿನಲ್ಲಿ ಕಾರ್ಯೋನ್ಮುಖರಾಗುವ ಅವರ ಕಾಳಜಿ, ಅನುಕರಣೀಯ. ಸದ್ದುಗದ್ದಲವಿಲ್ಲದೆ ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವ ನಮ್ಮೊಳಗಿನ ಅಪರೂಪದ ಅಧಿಕಾರಿ. ಸರಳತೆ, ಸಭ್ಯತೆ, ಸಜ್ಜನಿಕೆಯನ್ನು ಮೈಗೂಡಿಸಿಕೊಂಡು ಅನ್ಯಾಯ, ಅಧರ್ಮದೊಂದಿಗೆ ಎಂದಿಗೂ ರಾಜಿಮಾಡಿಕೊಳ್ಳದ, ಯಾರ ಹಂಗಿಗೂ ಒಳಗಾಗದ ಆದರ್ಶ ವ್ಯಕ್ತಿತ್ವ. ಅವರದು. ಅದಕ್ಕೆ ಅವರನ್ನು ಕಂಡರೆ ಎಲ್ಲರಿಗೂ ಗೌರವ, ಅಭಿಮಾನ.

ನಡೆ-ನುಡಿಯಲ್ಲಿ ಏಕತಾನತೆಯನ್ನು ಕಾಪಾಡಿ ಕೊಂಡಿರುವ ಶ್ರೀ ಗೋವಿಂದರಾಜು ಅವರು ಅಣ್ಣ ಬಸವಣ್ಣನವರು ಹೇಳುವಂತೆ 'ಎನಗಿಂತ ಕಿರಿಯರಿಲ್ಲ' ಎನ್ನುವ ವಿನಯ ಸಂಪನ್ನತೆ, ನಮ್ಮಲ್ಲಿ ಆದರ್ಶವ್ಯಕ್ತಿಗಳು ನಡೆದಂತೆ ನುಡಿಯುವವರೇ ತುಂಬಿರುವಾಗ ಅವರು ನುಡಿದಂತೆ ನಡೆಯುವುದು ತುಂಬಾ ಅಪರೂಪ. ಅಂತಹ ಅಪರೂಪದ ವ್ಯಕ್ತಿಗಳ ಸಾಲಿಗೆ ಶ್ರೀ ಗೋವಿಂದರಾಜು ಅವರು ಸೇರುತ್ತಾರೆಂಬುದು ಅವರನ್ನು ಹತ್ತಿರದಿಂದ ಬಲ್ಲ ಎಲ್ಲರೂ ಒಪ್ಪಿಕೊಳ್ಳುತ್ತಾರೆ.

ಶ್ರೀ ಗೋವಿಂದರಾಜು ಅವರು ಸರ್ಕಾರದ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿ ಆಯಾ ಹುದ್ದೆಗಳಿಗೆ ಘನತೆ, ಗೌರವವನ್ನು ತಂದುಕೊಟ್ಟ ಒಬ್ಬ ದಕ್ಷ, ಪ್ರಾಮಾಣಿಕ ನಿಷ್ಠಾವಂತ ಅಧಿಕಾರಿ. ಶ್ರೀಮಠದಿಂದ ಹೊರ ಹೊಮ್ಮಿದ ಪ್ರತಿಭೆ ಎಂದು ಹೇಳಿಕೊಳ್ಳುವುದಕ್ಕೆ ಅಭಿಮಾನವೆನಿಸುತ್ತದೆ. ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಾಶೀರ್ವಾದದಿಂದ ಅವರು ಇನ್ನು ಹೆಚ್ಚಿನ ಉನ್ನತ ಹುದ್ದೆಗಳನ್ನು ಅಲಂಕರಿಸಲಿ, ಹೆಚ್ಚು ಹೆಚ್ಚು ಪ್ರಶಸ್ತಿಗಳು ಅವರಿಗೆ ದೊರೆಯಲಿ ಎಂದು 'ಸಿದ್ಧಗಂಗಾ' ಹೃತ್ಪೂರ್ವಕವಾಗಿ ಹಾರೈಸುತ್ತದೆ.

– ಎಚ್.ಎಸ್. ಸಿದ್ದಗಂಗಪ್ಪ







# ಸಾವಿನ ನಂತರ.......

– ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು, ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು, ಬೆಂಗಳೂರು.

ಪ್ರತಿಯೊಂದು ಜೀವಿಯು ಹುಟ್ಟಿದ ಮೇಲೆ ಸಾಯಲೇಬೇಕು. ಇದು ಪ್ರಕೃತಿಯ ನಿಯಮ. ಸಾವು ಯಾರಿಗೆ? ಯಾವ ಸಮಯದಲ್ಲಿ ಹೇಗೆ ಬರುತ್ತದೆ ಎಂದು ಹೇಳುವುದು ಕಷ್ಟ. ವಯಸ್ಸಾದ ನಂತರ ಕಾಯಿಲೆಗೆ ತುತ್ತಾಗಿ ಅಥವಾ ಮತ್ತಾವುದೋ ದುರಂತಕ್ಕೆ ತುತ್ತಾಗಿ ಅಥವಾ ರಣರಂಗದಲ್ಲಿ ಹೋರಾಡಿ ಸಾವು ಬರಬಹುದು. ಹೀಗೆ ಅನೇಕ ಕಾರಣಗಳಿಂದ ಸಾವು ಸಂಭವಿಸುತ್ತದೆ. ವೈದ್ಯಕೀಯ ರಂಗದಲ್ಲಿ ಅನೇಕ ಸಂಶೋಧನೆಗಳಿಂದ ವ್ಯಕ್ತಿಯ ಪ್ರಾಣ ಉಳಿಸಲು, ರಕ್ಷಿಸಲು ವೈದ್ಯರು ಶ್ರಮಿಸುತ್ತಾರೆ. ಆದರೂ ಸಹ ಪ್ರಾಣ ಉಳಿಸಲು ಸಾಧ್ಯವಾಗಿಲ್ಲ. ಆದರೆ ಮರಣದ ನಂತರ ನಡೆಸುವ ವಿಧಿ ವಿಧಾನಗಳು, ಸಮಾಜ, ತನ್ನ ಸ್ವಾರ್ಥಕ್ಕಾಗಿ ನಿರ್ಮಿಸಿರುವ ಕಟ್ಟುಪಾಡು ಅತ್ಯಂತ ಘೋರ. ಕೆಲವು ಪಂಗಡಗಳಲ್ಲಿ ಸ್ಮಶಾನಯಾತ್ರೆಯನ್ನು ಅದ್ಧೂರಿಯಾಗಿ ನಡೆಸುವುದು, ಕುಡಿದು ತೂರಾಡುತ್ತ ನರ್ತನ ಮಾಡುವುದು, ಪಟಾಕಿ ಹೊಡೆಯುವುದು ಇವೆಲ್ಲ ಪದ್ಧತಿ ನೋಡಿದರೆ ಯಾರೇ ವಿಚಾರವಂತರಿಗೆ ಜಿಗುಪ್ಸೆ ಉಂಟಾಗುವುದು ಸಹಜ. ದೀರ್ಘಕಾಲದ ರೋಗಗಳು ಉದಾಹರಣೆಗೆ ಕ್ಯಾನ್ಸರ್, ಕ್ಷಯ, ರಕ್ತದ ಒತ್ತಡ, ಡಯಾಬಿಟೀಸ್, ಮೂತ್ರಪಿಂಡದ ವಿಫಲತೆ, ಪಾರ್ಶ್ವವಾಯು ಇತ್ಯಾದಿ ತೊಂದರೆಗಳಿಗೆ ರೋಗಿಗಳು ದೀರ್ಘಕಾಲದವರೆಗೆ ಚಿಕಿತ್ಸೆ ಪಡೆದು ಹತಾಶರಾಗಿರುತ್ತಾರೆ. ಕುಟುಂಬದ ಸದಸ್ಯರು, ರೋಗಿಯ ಶುಶ್ರೂಷೆ ಮಾಡುತ್ತಿರುವವರು ಹಣದ ಖರ್ಚಿನ ಜತೆಗೆ ಆಸ್ಪತ್ರೆಗೆ ಓಡಾಟ, ರೋಗಿಯು ನರಳುವುದನ್ನು ನೋಡಿ ದುಃಖಪಡುತ್ತಾರೆ. ಇವೆಲ್ಲ ಘಟನೆಗಳ ನಂತರ ಮರಣ ಸಂಭವಿಸಿದಾಗ ಜರುಗುವ ವಿಧಿ ವಿಧಾನಗಳು, ಸಮಾಜ ವಿಧಿಸುವ ಕಟ್ಟುಪಾಡು ನಿಜಕ್ಕೂ ದುರದೃಷ್ಟಕರ. ಆಸ್ಪತ್ರೆ ಅಥವಾ ನರ್ಸಿಂಗ್ ಹೋಂ ಬಿಲ್ಲಿನ ಪಾವತಿ ಶವ ಕೊಡುವ ಮೊದಲೇ ಸಂಪೂರ್ಣವಾಗಿ ಸಂದಾಯ ಮಾಡಬೇಕು. ಸಾವಿಗೆ ಆತ್ಮಹತ್ಯೆ, ಅಪಘಾತ, ಕೊಲೆ ಕಾರಣ ಆಗಿದ್ದರೆ ಶವಪರೀಕ್ಷೆ ನಡೆಸಬೇಕು. ಶವಪರೀಕ್ಷೆಗೆ ಸಂಬಂಧಪಟ್ಟವರೆಲ್ಲರಿಗೂ ಜೇಬು ತುಂಬಿಸಬೇಕು. ಪ್ರತಿಯೊಂದು ಹಂತದಲ್ಲೂ ಸಮಯದ ದುರುಪಯೋಗ ಪಡಿಸಿಕೊಳ್ಳುವ ಸಮಯ ಸಾಧಕರು. ಇವರೆಲ್ಲರನ್ನು ಸಮಾಧಾನಪಡಿಸಿ ಶವವನ್ನು ಮನೆಗೆ ತಂದಾಗ ಮನೆಗೆ ಬರುವವರ ಕಾಟ ಸಹಿಸಲಸಾಧ್ಯ. ಪ್ರತಿಯೊಬ್ಬರು ಬಂದು ಮೃತರ ಆಪ್ತರನ್ನು ಅಂದರೆ ಪತಿ ಅಥವಾ ಪತ್ನಿ, ಮಕ್ಕಳನ್ನು ಮೃತರ ಸಾವಿಗೆ ಕಾರಣವನ್ನು ವಿಚಾರಿಸುವವರೆ! ದುಃಖಪೀಡಿತರಾದವರನ್ನು ಸಮಾಧಾನಪಡಿಸುವುದಕ್ಕೆ ಬದಲಾಗಿ ''ಏನಾಯಿತು? ಯಾವ ಆಸ್ಪತ್ರೆ, ಯಾರು ಡಾಕ್ಟ್ರು? ಏಕೆ ಆ ಆಸ್ಪತ್ರೆಗೆ ಹೋದ್ರಿ?! ನನಗೆ ಗೊತ್ತಾಗಿದ್ರೆ, ಬೇರೆ ಡಾಕ್ಟ್ರು, ಬೇರೆ ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿದ್ದೆ. ಅಗ ಅವರು ಬದುಕುತ್ತಿದ್ರು'' ಇಂತಹ ಮಾತುಗಳನ್ನಾಡಿ ಮನಸ್ಸಿಗೆ ನೋವುಂಟು ಮಾಡುವುದೇ ಹೆಚ್ಚು. ಬದುಕಿದ್ದಾಗ ಕಾಣದಿರುವ ವ್ಯಕ್ತಿಗಳೆಲ್ಲ ಸತ್ತನಂತರ ಹಾಜರ್! ಮುಜುಗರ ತರುವ ಕೆಲವು ದೃಶ್ಯಗಳೆಂದರೆ ಸಾವಿನ ಮನೆಯಲ್ಲೂ ಸಹ ನೋಡಲು ಬರುವವರ ವೇಷ ಭೂಷಣಗಳ ಪ್ರದರ್ಶನ, ಶೋಕ ವ್ಯಕ್ತಪಡಿಸುವವರು ಕೆಲವರಾದರೆ, ಸಮಯ ಕಳೆಯಲು, ಹೋಗಿ ಬರುವವರನ್ನು ನೋಡುತ್ತ, ಹಾಸ್ಯಮಾಡುತ್ತ ಮೆರೆಯುವವರು ಹಲವರು. ಶವ ಸಂಸ್ಕಾರದ ವಿಧಿ ವಿಧಾನಗಳ ಭಯ ಹುಟ್ಟಿಸುವವರು ಹಲವರು. ''ಈ ದಿನ ಅಮಾವಾಸ್ಯೆ! ಸಾಯಬಾರದಿತ್ತು! ಕೆಲವು ಸಂದರ್ಭಗಳಲ್ಲಿ ಸಾವು ಉಂಟಾಗಿದ್ದರೂ ಸಹ ಈಗ ನಕ್ಷತ್ರ ಸರಿಯಿಲ್ಲ. ಕಾಲ ಸರಿಯಿಲ್ಲ. ಆಸ್ಪತ್ರೆ/ನರ್ಸಿಂಗ್ ಹೋಂನಲ್ಲಿ ಇನ್ನು ಒಂದು ಘಂಟೆ ಇಟ್ಟಿದ್ದು ನಂತರ ಪ್ರಾಣಹೋಯಿತು ಎಂದು ತಿಳಿಸಿ ಎಂದು ವೈದ್ಯರಿಗೆ ತಿಳಿಸಿದ ನಿದರ್ಶನಗಳು ಹಲವಾರು. ಶವಸಂಸ್ಕಾರ ನಡೆಸುವ ಸ್ಪೆಷಲಿಸ್ಟ್‌ಗಳು! ಎಲ್ಲ ಜಾತಿ, ಪಂಗಡಗಳಲ್ಲಿ ಇದ್ದಾರೆ. ಭಯ, ಭೀತಿ ಹುಟ್ಟಿಸಿದಷ್ಟೂ ಹೆಚ್ಚು

ಹಣ ಕೇಳಬಹುದು. ಇಂತಹ ನಕ್ಷತ್ರದಲ್ಲಿ/ಕಾಲದಲ್ಲಿ ಪ್ರಾಣ ಹೋಗಿದೆ ಆದ್ದರಿಂದ ಒಂದು ತಿಂಗಳು ಮನೆ ಬದಲಿಸಬೇಕು. ಇದು ಸಾಧ್ಯವಾಗದಿದ್ದಲ್ಲಿ ಶಾಂತಿ ಮಾಡಿಸಬೇಕು. ಶಾಸ್ತ್ರ ಮಾಡುವವರಿಗೆ ಇವೆಲ್ಲ ದಾನ ಮಾಡಬೇಕು. ಕೆಲವರಲ್ಲಿ ಭೀಕರವಾದ ವಿಧಿ-ವಿಧಾನಗಳು. ಶವಕ್ಕೆ ಈ ರೀತಿಯಲ್ಲಿ ಸ್ನಾನ ಮಾಡಿಸಬೇಕು. ಶೋಕತಪ್ತ ಮನೆ ಮಕ್ಕಳು ಒಬ್ಬೊಬ್ಬರಾಗಿ ಬಂದು ಶವದ ತಲೆಮೇಲೆ ಬಿಂದಿಗೆ ನೀರು ಸುರಿಯಬೇಕು.

ಇಷ್ಟೇ ಜನ ಸ್ವಾಮಿಗಳು ಅಥವಾ ಶಾಸ್ತ್ರಿಗಳು ಬರಬೇಕು. ಇವರೆಲ್ಲರಿಗೂ ಇಂತಿಷ್ಟು ದಕ್ಷಿಣೆ. ನಂತರ ಶವವಾಹಕ ವಾಹನ. ಕಾರ್ಪೋರೇಷನ್‌ಗೆ ಮುಂಚಿತವಾಗಿಯೇ ಫೋನ್ ಮಾಡಬೇಕು. ಶಿಫಾರಸು ಇದ್ದರೆ ಒಳ್ಳೆಯದು. ಇಲ್ಲದಿದ್ದರೆ ತಡವಾಗಿ ಬರುತ್ತದೆ. ಇತ್ತೀಚೆಗೆ ಸಮಾಧಾನಕರ ಬೆಳವಣಿಗೆಯೆಂದರೆ ಕೆಲವು ಸಮಾಜಸೇವಾ ಸಂಸ್ಥೆಗಳು ಉಚಿತವಾಗಿ ವಾಹನ ಸೌಲಭ್ಯ ಕಲ್ಪಿಸುತ್ತಿದ್ದಾರೆ. ಇದು ನಿಜಕ್ಕೂ ಶ್ಲಾಘನೀಯ ಸೇವೆ. ಇನ್ನು ಸ್ಮಶಾನ ಸೇರಿದ ಮೇಲೆ ಗುಂಡಿ ತೋಡುವವರಿಗೆ, ಅಥವಾ ವಿದ್ಯುಚ್ಛಕ್ತಿ ಸೌದೆ ಉಪಯೋಗಿಸಿ ಶವದಹನ ಕ್ರಿಯೆ, ಸ್ಮಶಾನದಲ್ಲಿ ಅಂತಿಮವಾಗಿ ಪೂಜೆ ನಡೆಸುವವರನ್ನು ಸ್ಮಶಾನದಲ್ಲಿ ಕಾರ್ಪೋರೇಶನ್ ಸಿಬ್ಬಂದಿಗಳನ್ನು ಸಂತೋಷಪಡಿಸಬೇಕು. ಇವೆಲ್ಲ ಕಾರ್ಯಗಳು ಮುಗಿಸುವಷ್ಟರಲ್ಲಿ ಮೃತರ ಮಡದಿ, ಮಕ್ಕಳು, ಆಪ್ತರು ಹತಾಶರಾಗಿರುತ್ತಾರೆ. ಹೊಟ್ಟೆಗೆ ಆಹಾರ ಸೇವಿಸುವುದಿರಲಿ ಕೆಲವೊಮ್ಮೆ ನೀರು ಸಹ ಕುಡಿಯುವಂತಿಲ್ಲ, ನಿದ್ದೆಯಿಲ್ಲ ತಲೆಸುತ್ತಿ ಬೀಳುವುದು ಸಾಮಾನ್ಯದೃಶ್ಯ. ಇಷ್ಟೆಲ್ಲಾ ಆದ ಮೇಲೆ ಮನೆಗೆ ಹಿಂದಿರುಗಿ ಸ್ನಾನಮಾಡಿ ಬೇಳೆ ಹುಳಿ ಆಹಾರ ಸೇವಿಸಬೇಕು. ಇವೆಲ್ಲ ಕಾರ್ಯಗಳು ಕೆಲವು ಮಟ್ಟಿಗೆ ಸಹಿಸಲು ಸಾಧ್ಯ. ಆದರೆ ಕೆಲವು ಪಂಗಡಗಳಲ್ಲಿ ಹಲವಾರು ಕ್ರೂರ ವಿಧಾನಗಳು ಇಂದಿಗೂ ಜಾರಿಯಲ್ಲಿವೆ. ಮೃತರ ಮಕ್ಕಳ ಹಾಗೂ ವಿಧವೆಯರ ಕೂದಲು ಕತ್ತರಿಸುವುದು (ಕೇಶ ಮಂಡನ) ಮಾಂಗಲ್ಯಸರ ಕಿತ್ತು ತೆಗೆಯುವುದು, ಕೈಬಳೆಗಳನ್ನು ಒಡೆದು ಹಾಕುವುದು. ಇಂತಹ ಪದ್ಧತಿಗಳು ಉತ್ತರ ಭಾರತದ ಕೆಲವೆಡೆ ಸತಿ ಪದ್ಧತಿ ಇವುಗಳು ಮಾನವೀಯತೆ ಉಳ್ಳ ವ್ಯಕ್ತಿಗಳಿಗೆ ಸಹಿಸಲಸಾಧ್ಯ. ಇಷ್ಟೆಲ್ಲ ಆದನಂತರ ೩ನೇ ದಿನ ಅಥವಾ ೫ನೇ ದಿನಕ್ಕೆ ಹಾಲು ತುಪ್ಪ ಸಮಾಧಿಗೆ ಹಾಕಬೇಕು. ಸಮಾಧಿಯಲ್ಲಿ ಮಂಟಪ ಕಟ್ಟಬೇಕು. ಹನ್ನೊಂದನೇ ದಿನದ ಶ್ರಾದ್ಧ ಅದ್ದೂರಿಯಾಗಿ ನಡೆಸಬೇಕು. ಇದಕ್ಕಾಗಿ ಛತ್ರ ಹುಡುಕಬೇಕು. ಅಡಿಗೆಯವರನ್ನು ಗೊತ್ತು ಮಾಡಬೇಕು. ಅರ್ಜೆಂಟಾಗಿ ಕಾರ್ಡ್ ಮುದ್ರಿಸಬೇಕು. ಇಂತಹ ಸಂದರ್ಭದಲ್ಲೂ ಕೆಲವರಿಂದ ನಮ್ಮನ್ನು ಕರೆಯಲಿಲ್ಲ. ನಮಗೆ ಗೊತ್ತಾಗಲಿಲ್ಲ ಎಂಬ ಕುಹಕ ನುಡಿಗಳು. ಕೆಲವು ಪಂಗಡದವರಲ್ಲಿ ಪ್ರತಿತಿಂಗಳು ಶ್ರಾದ್ಧ ಮಾಡಬೇಕು, ಪ್ರತಿವರ್ಷ ತಪ್ಪದೆ ಮಾಡಬೇಕು. ಮೊದಲೇ ನೊಂದವರಿಗೆ ಪದೇ ಪದೇ ಮಾನಸಿಕವಾಗಿ, ಆರ್ಥಿಕವಾಗಿ ಪೆಟ್ಟು ಮುಗ್ಧ ಚಿಕ್ಕ ವಯಸ್ಸಿನ ವಿಧವೆಯವರಿಗೆ ಗಂಡನ ಮನೆ ಕಡೆಯವರಿಂದ ಮೂದಲಿಕೆ ಮಾತುಗಳು. ವಡೆ, ಪಾಯಸ ತಿನ್ನಲು, ದಕ್ಷಿಣೆಗಾಗಿ ಹಾತೊರೆದು ಕಾಯುವ ಜನರ ಸಾಲು ಸಾಲು.

ಬದುಕಿದ್ದಾಗ ಚಿಕಿತ್ಸೆಗಾಗಿ ಸಾಲ, ಸತ್ತನಂತರ ಶ್ರಾದ್ಧ ಆಚರಿಸಲು ಸಾಲ. ಹೀಗೆ ಲಕ್ಷಾಂತರ ರೂಪಾಯಿ ಸಾಲಮಾಡಿ ಸೊರಗುವ ಕುಟುಂಬಗಳು ಸಾವಿರಾರು. ಮರಣ ಸರ್ಟಿಫಿಕೇಟ್‌ಗಾಗಿ ಲಂಚ, ಇನ್ಶೂರೆನ್ಸ್ ಹಣ ಪಡೆಯಲು ಲಂಚ, ವಿಧವೆ ಪೆನ್ಷನ್‌ಗಾಗಿ ಲಂಚ ಹೀಗೆ ಮುಂದುವರೆಯುವುದನ್ನು ಕಂಡು ಕೆಲವು ವಿಚಾರವಂತರು ಹೇಳುವುದುಂಟು. ''ಸತ್ತವನು ಬದುಕಿದ. ಆದರೆ ಬದುಕಿ ಸಾಯುವವರು ಹಲವರು''. ಇಂತಹ ಕ್ರೂರ ವಿಧಿ ವಿಧಾನಗಳಿಗೆ ಕೊನೆ ಎಂದು? ವಿಧವೆಯ ಆಸ್ತಿ ಲಪಟಾಯಿಸಲು ಹಾತೊರೆಯುವ ರಣಹದ್ದುಗಳಿಂದ ಬಿಡುಗಡೆ ಎಂದು? ಸಮಾಜ ಕಾರ್ಯಕರ್ತರು, ಬುದ್ಧಿಜೀವಿ ಗಳು, ವಿಚಾರವಂತರು, ಮಹಿಳಾ ಮಂಡಳಿಗಳು ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕು. ನೊಂದ ಮನಸ್ಸುಗಳಿಗೆ ಸ್ವಾಂತನ ಹೇಳುವ, ಧೈರ್ಯ ತುಂಬುವ ಕೆಲಸ ಮಾಡಬೇಕು.

★

**ನಿಮಗಿದು ತಿಳಿದಿರಲಿ** — **ತಲೆನೋವು**

ತಲೆನೋವಿದ್ದರೆ ಯಾವುದೇ ಬಟ್ಟೆಯಿಂದ ತಲೆಯನ್ನು ಕಟ್ಟಿಕೊಳ್ಳಿ ಅಥವಾ ಹಾಲಿನ ಬದಲಿಗೆ ನಿಂಬೆರಸವನ್ನು ಮಿಶ್ರಮಾಡಿಕೊಂಡು ಬಿಸಿ ಬಿಸಿಯಾದ ಟೀ ಕುಡಿಯಿರಿ. ಇವೆರಡೂ ಉಪಾಯಗಳಲ್ಲದೆ, ಅಡಿಗೆ ಉಪ್ಪನ್ನು ನಾಲಿಗೆಯ ಮೇಲೆ ಹಾಕಿಕೊಂಡು ನೀರು ಕುಡಿಯಿರಿ. ಆದರೆ ಉಪ್ಪಿನ ಉಪಾಯ ಮಾಡುವ ಮೊದಲು ರಕ್ತದೊತ್ತಡದಿಂದ ಬಳಲುತ್ತಿಲ್ಲವೆಂಬುದು ಖಾತ್ರಿಯಾಗಿರಲಿ.





# ಭಾರತ ಮತ್ತು ಯುವಕರ ಆತ್ಮಶಕ್ತಿ

– ಕವಿತಾಕೃಷ್ಣ
ಸಾಹಿತಿಗಳು,
ಕ್ಯಾತಸಂದ್ರ, ತುಮಕೂರು.

ಭಾರತ ವಿಶ್ವದಲ್ಲಿಯೆ ಅತಿ ಹಿರಿದಾದ ಪ್ರಜಾಪ್ರಭುತ್ವ ಹೊಂದಿರುವ ಅಸಾಮಾನ್ಯರಾಷ್ಟ್ರ. ಇದು ಇಂದಿಗೂ ಸಹ ಹತ್ತು ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ಇಲ್ಲಿನ ಸಂಸ್ಕೃತಿ, ನಾಗರಿಕತೆ, ಸಹಾನುಭೂತಿ, ಧಾರ್ಮಿಕ ಪ್ರಜ್ಞೆ, ಸಾಮಾಜಿಕ ಕಳಕಳಿ ಇಡೀ ಜಗತ್ತೇ ಮೆಚ್ಚುವಂತದ್ದು. ಆಧ್ಯಾತ್ಮಿಕ ಸಂಪತ್ತು ಈ ರಾಷ್ಟ್ರಕ್ಕೆ ಬಹುಮನ್ನಣೆ ನೀಡಿದೆ. ಭಾರತ ಇಡೀ ಜಗತ್ತಿಗೆ ಜ್ಞಾನದ ಬೆಳಕು ಚೆಲ್ಲಲು ಅರ್ಹತೆ ಹೊಂದಿದ ದೇಶವಾಗಿದೆ. ಭಾರತದ ಭವ್ಯತೆ ಕಂಡು ಜನ ಇದನ್ನು ಭರತಖಂಡ ಎಂದು ಕರೆದರು.

ಭಾರತ ಇಂದು ಗಂಡಾಂತರದ ಸುಳಿಗೆ ಸಿಲುಕಿದೆ. ಭಯೋತ್ಪಾದನೆಯಿಂದ ನಲುಗಿದೆ. ಜಮ್ಮು-ಕಾಶ್ಮೀರಗಳು ದಾವಾಗ್ನಿಕುಂಡವಾಗಿವೆ. ವಿದ್ಯದ ಅಧಿದೇವತೆಯಾದ ಶಾರದಾದೇವಿಯನ್ನು ಹಿಂದೆ ಕಾಶ್ಮೀರಪುರವಾಸಿನಿ ಎಂದು ಸ್ಮರಿಸಲಾಗಿತ್ತು. ಇಂದು ಅಲ್ಲಿ ಮಾನವರ ಬೇಟೆಯಾಡಲ್ಪಡುತ್ತಿದೆ. ಅಮಾಯಕರು ಪ್ರಾಣತೆತ್ತುತ್ತಲೇ ಇದ್ದಾರೆ. ಅಲ್ಲಿನ ಅರಾಜಕತೆ ಹೇಳತೀರದು. ವಿದೇಶಿ ಉಗ್ರಗಾಮಿಗಳ ದಳ್ಳುರಿಯಿಂದ ನಿತ್ಯ ನರಹತ್ಯೆ ನಡೆಯುತ್ತಿದೆ. ಅಮಾನವೀಯತೆ ತಾಂಡವವಾಡುತ್ತಿದೆ.

ಭಾರತವು ಭಯೋತ್ಪಾದಕರ ಅಟ್ಟಹಾಸದ ಕುಕೃತ್ಯಗಳಿಂದ ನಾಶವಾಗುವುದೆ? ಈ ಪ್ರಶ್ನೆಗೆ ಉತ್ತರ : ಭಾರತ ಅಷ್ಟು ಸುಲಭವಾಗಿ ನಾಶವಾಗದು; ಅದು ಇಂದು ಸರ್ವಬಲಗೂಡಿ ಸಶಕ್ತವಾಗಿದೆ. ಭಾರತ ಅಜೇಯವಾಗಿದೆ. ಹಾಗೊಮ್ಮೆ ಭಾರತ ವಿನಾಶವಾದರೆ ಸೂರ್ಯಾಸ್ತ ನಂತರ ಕಗ್ಗತ್ತಲು ಕವಿಯುವಂತೆ ಇಡೀ ವಿಶ್ವ ಕರಾಳಕತ್ತಲಲ್ಲಿ ಮುಳುಗಿ ಹೋಗುವುದು. ಭಾರತ ಭಾಸ್ಕರನ ಅಸ್ತಮಾನದಿಂದ ಇಡೀ ಜಗತ್ತಿನಲ್ಲಿ ನೈತಿಕಶಕ್ತಿಯೇ ಸತ್ತು ಹೋಗುವುದು. ಪ್ರಜಾಪ್ರಭುತ್ವ ವಿನಾಶವಾಗಿ ಆಸುರೀಶಕ್ತಿ ತಲೆ ಎತ್ತಿ ಮಾನವೀಯತೆಯು ಅಧಃಪತನ ಹೊಂದುವುದು. ಸತ್ಯ-ಧರ್ಮ-ತ್ಯಾಗ ಮಧುರಭಾವಾದಿಗಳು ಮಣ್ಣುಗೂಡುವವು. ವಿಶ್ವದ ಸ್ವಾತಂತ್ರ್ಯ ಹರಣವಾಗಿ, ಸ್ವೈರತೆ ತಾಂಡವ ಮೆರೆತದಲ್ಲಿ ಎಲ್ಲರ ಬದುಕು ಮಣ್ಣುಗೂಡುವುದು.

### *'ರಾಷ್ಟ್ರೋನ್ನತಿ ಯುವಕರ ಆತ್ಮಶಕ್ತಿಯಿಂದ'*

'ಸರ್ವೇ ಜನಾಃ ಸುಖಿನೋಭವಂತು' ಎಂಬುದು ನಮ್ಮ ರಾಷ್ಟ್ರದ ಮಹದಾಶಯ. ಇಲ್ಲಿ ಬದುಕುವರು ಯಾವ ಧರ್ಮದವರಿರಲಿ, ಯಾವ ಜಾತಿಯವರಿರಲಿ, ಯಾವ ಪ್ರಾಂತ್ಯದವರಿರಲಿ, ಯಾವ ಭಾಷೆಯವರಿರಲಿ ಲಿಂಗಭೇದವಿಲ್ಲದೆ ಇಲ್ಲಿ ಎಲ್ಲರೂ ಸಮಾನರು. ಈ ದೇಶ ಇವರೆಲ್ಲರ ಸುಖವನ್ನು ಬಯಸುತ್ತದೆ. ಜಗತ್ತಿನಲ್ಲಿ ಇಷ್ಟು ಉದಾತ್ತಭಾವವನ್ನು ಇನ್ಯಾವ ರಾಷ್ಟ್ರವು ಹೊಂದಿರುವುದು ವಿರಳ. ಆದರೆ ಇಂದು ದೇಶವು ಜಾತಿ-ಮತ-ಧರ್ಮ- ಭಾಷೆಗಳ ವಿಚಾರದಲ್ಲಿ ಸೌಹಾರ್ದಭಾವ ಕಳೆದುಕೊಳ್ಳುತ್ತಿದೆ. ಅನ್ಯಾಯ, ಅಧರ್ಮಗಳು ತಲೆ ಎತ್ತುತ್ತಿವೆ. ರಾಷ್ಟ್ರೀಯ ಭಾವೈಕ್ಯತೆ ಪುಸ್ತಕದಲ್ಲಿ ಮಾತ್ರ ಉಳಿದು ಆಚರಣೆಯಲ್ಲಿ ಹದ ತಪ್ಪಿದೆ. ಆರ್ಥಿಕ ಅಸಮಾನತೆ ತಲೆ ಎತ್ತಿದೆ. ಇದರೊಂದಿಗೆ ಒಳಗಿನ, ಹೊರಗಿನ ಭಯೋತ್ಪಾದ ಕುಕೃತ್ಯಗಳು ದೇಶವನ್ನು ಅಭದ್ರಗೊಳಿಸಲು ಮುಂದಾಗಿವೆ. ಜಾಗತಿಕರಣ, ಉದಾರಿಕರಣಗಳು ದೇಶದ ಮೇಲೆ ಒಳಿತಿನ ವಾತಾವರಣ ಮೂಡಿಸುವಲ್ಲಿ ಫಲಕಾರಿಯಾಗಿಲ್ಲ, ನಿರುದ್ಯೋಗ ಸಮಸ್ಯೆ ಬೃಹತ್ತಾಗಿ ಕಾಡಲಾರಂಭಿಸಿದೆ. ರಾಜಕೀಯ ಪಕ್ಷಗಳು ಕೂಡ ಅಭದ್ರವಾಗಿವೆ. ಬುದ್ಧಿಜೀವಿಗಳು ಬಾಯಿ ಹೊಲಿದುಕೊಂಡಿದ್ದಾರೆ. ನಮ್ಮಲ್ಲಿ ಒಳ್ಳೆಯದನ್ನು ಮೆಚ್ಚುವ, ಕೆಟ್ಟದ್ದನ್ನು ಖಂಡಿಸುವ ಗುಣ ಮಾಯವಾಗಿರುವುದು ಕೂಡ ರಾಷ್ಟ್ರದ ಅಭ್ಯುದಯಕ್ಕೆ ಮಾರಕವಾಗಿದೆ. ರಾಷ್ಟ್ರ ಕುಸಿದು ಬೀಳುತ್ತಿದೆ.

ಕುಸಿದು ಬೀಳುತ್ತಿರುವ ನಮ್ಮ ರಾಷ್ಟ್ರವನ್ನು ಮೇಲೆತ್ತುವ ಕಾರ್ಯವು ಈ ರಾಷ್ಟ್ರದ ಯುವಕರದಾಗಿದೆ. ಅವರು ಜನನೀ, ಜನ್ಮಭೂಮಿಗಳು ಸ್ವರ್ಗಕ್ಕಿಂತ ಮಿಗಿಲು ಎಂದರಿತು ಮೇಲೆತ್ತುವ ಕಾರ್ಯಕ್ಕೆ ಪ್ರಾಂಜಲ ಚಿತ್ತದಿಂದ ಮುಂದಾಗಬೇಕಾಗಿದೆ. ಅದು ಎತ್ತುವುದಾದರೆ ಅಪೂರ್ವವಾದ ಆತ್ಮಶಕ್ತಿಯಿಂದ ಮಾತ್ರ. ಯುವಕರ ಆತ್ಮಶಕ್ತಿ ಒಗ್ಗೂಡುವಿಕೆಯಿಂದ ರಾಷ್ಟ್ರೋದ್ಧಾರದ ಕಾರ್ಯ ಸಾಧ್ಯ. ಎಲ್ಲ ಯುವಶಕ್ತಿಗಳು ಮೇಳೈಸಬೇಕಾದುದು ಅನಿವಾರ್ಯವಾಗಿದೆ.

### *ಸಹಕಾರ ತತ್ವ*

ಭಾರತದ ಉಜ್ವಲ ಭವಿಷ್ಯವು ಸತ್ಯಸ್ಪಸತ್ಯವಾಗಿ ವಿಜೃಂಭಿಸಲು ರಾಷ್ಟ್ರದ ಯುವಕರು ಮೊದಲು ಒಂದಾಗಬೇಕು. ಒಂದಾಗಲು ಬೇಗ ಮುಂದಾಗಬೇಕು. ಮನವನ್ನು ಮಡಿ ಮಾಡಿಕೊಳ್ಳಬೇಕು. ಅಲ್ಲಿ ಭಾರತ ಮಾತೆಯನ್ನು ಪ್ರತಿಷ್ಠಾಪಿಸಬೇಕು. ಕಾಯಕತತ್ವವನ್ನು ಅನುಷ್ಠಾನಕ್ಕೆ ತರಬೇಕು. ಮಹಾತ್ಮ ಗಾಂಧೀಜಿಯವರ ಪಂಚಶೀಲ ಸೂತ್ರವನ್ನು ಪಾಲಿಸಬೇಕು. ಶ್ರಮದ ದುಡಿಮೆ ನಮ್ಮದಾಗಬೇಕು. ಸತ್ಯ-ಶಾಂತಿ-ತ್ಯಾಗಗಳು ಉಸಿರಾಗಬೇಕು. ಆಧುನಿಕತೆಯ ಸೋಗಿನಿಂದ ದೂರಾಗಬೇಕು. ಕೂಡಿ ಬಾಳುವ, ಕೂಡಿ ದುಡಿಯುವ, ಕೂಡಿ ಉಣ್ಣುವ ಬದುಕು ನಮ್ಮದಾಗಬೇಕು. ಸಹಕಾರ ತತ್ವದಿಂದ ಎಲ್ಲರ ಉದಯ. ಈ ಸತ್ಯವನ್ನು ಆಚರಣೆಯಿಂದ ತಿಳಿಯಬೇಕು. ಪ್ರೀತಿ, ಪ್ರೇಮ, ಸೌಹಾರ್ದಭಾವ ಎಂತಹವರನ್ನಾದರೂ ಗೆಲ್ಲಬಹುದು. ಅದು ಯುವಕರ ಆದರ್ಶವಾಗಬೇಕು. ಅವರ ಆತ್ಮಶಕ್ತಿ ಸದಾ ಜಾಗೃತವಾಗಿರಬೇಕು.

★

# ಬೇಲೂರಿನಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಸಮುದಾಯ ಭವನ : ಲೋಕ ಸಮರ್ಪಣೆ



ಪರಮಪೂಜ್ಯ ಶ್ರೀ ಶ್ರೀಗಳವರು ಟೇಪು ಕತ್ತರಿಸುವ ಮೂಲಕ ಸಮುದಾಯ ಭವನ ಉದ್ಘಾಟಿಸುತ್ತಿರುವುದು

ಡಾ. ಶಿವಕುಮಾರಸ್ವಾಮಿ ಟ್ರಸ್ಟ್ ಬೇಲೂರಿನಲ್ಲಿ ನಿರ್ಮಿಸಿರುವ ಸಮುದಾಯ ಭವನದ ಉದ್ಘಾಟನೆಯನ್ನು ನವೆಂಬರ್ ೧೯ರಂದು ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನೆರವೇರಿಸಿದರು.

ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನದಲ್ಲಿ 'ಇಂದು ಪ್ರಪಂಚದಲ್ಲಿ ಅಶಾಂತಿ, ಬರ್ಬರತೆ, ಭಯೋತ್ಪಾದನೆಗಳು ಹೆಚ್ಚುತ್ತಿವೆ. ಪ್ರಕೃತಿ ವಿಕೋಪದಿಂದ ಮಳೆ ಬರದೆ ಬರಗಾಲ ಉಂಟಾಗಿದೆ. ರೈತರು ಕಷ್ಟದಲ್ಲಿದ್ದಾರೆ. ಪ್ರಗತಿ ಬಹುಮುಖವಾಗಿದೆಯಾದರೂ ಅಶಾಂತಿಯ ನೂರಾರು ಸಮಸ್ಯೆಗಳು ಕಾಡುತ್ತಿವೆ. ಇಂತಹ ಪರಿಸ್ಥಿತಿಯಲ್ಲಿ ೧೨ನೇ ಶತಮಾನದ ಮಹಾಮಾನವತಾವಾದಿ ಬಸವಣ್ಣನವರ ತತ್ವಪಾಲನೆಯಿಂದ ಮಾನವಕೋಟಿ ಶಾಂತಿಯಿಂದ ಬದುಕಬಹುದು. ಪ್ರಜ್ಞಾವಂತರಾಗಿ ಮನುಷ್ಯ ಮನುಷ್ಯನಾಗಿ ಬದುಕುವುದನ್ನು ಕಲಿಯಬೇಕು'' ಎಂದರು.

'ಇಂದು ಜನರಲ್ಲಿನ ಶಾಂತಿಗೆ ಭಂಗ ಉಂಟಾಗಿದೆ. ಸೆ-೧೧ರ ಅಮೇರಿಕಾ ಘಟನೆ, ಡಿ-೧೩ರ ದೆಹಲಿ ಘಟನೆಗಳು ಸ್ಮರಿಸಿದಾಗ ಪ್ರಪಂಚ ಎತ್ತ ಸಾಗುತ್ತಿದೆ ಎಂಬ ಗಾಬರಿ ಉಂಟಾಗುತ್ತದೆ' ಎಂದು ಸ್ವಾಮೀಜಿ ಆತಂಕ ವ್ಯಕ್ತಪಡಿಸಿದರು. ಇಸ್ಲಾಂ, ಬೌದ್ಧ, ಕ್ರೈಸ್ತ ಎಲ್ಲ ಧರ್ಮಗಳೂ ಮಾನವೀಯತೆಯನ್ನು ಪರಸ್ಪರ ಪ್ರೀತಿ, ವಿಶ್ವಾಸವನ್ನು ಬೋಧಿಸಿವೆ. ಮಾನವೀಯತೆಯೆ ಮೂಲಧರ್ಮ. ಇದರ ಆಚರಣೆಯಿಂದ ಮಾತ್ರ ಜಗತ್ತಿನಲ್ಲಿ ಶಾಂತಿ ನಡೆಸಲು ಸಾಧ್ಯ ಎಂದು ಪ್ರತಿಪಾದಿಸಿದರು. ಆನ್‌ಲೈನ್ ಲಾಟರಿಯ ಬಗ್ಗೆ ಪ್ರಸ್ತಾಪಿಸಿ ರಾಜ್ಯ ಸರಕಾರ ಆನ್‌ಲೈನ್ ಲಾಟರಿಗೆ ಅನುಮತಿ ನೀಡಿರುವುದರಿಂದ ಬಡಕುಟುಂಬಗಳು ಬೀದಿ ಪಾಲಾಗುತ್ತಿವೆ. ಕುಡಿತ, ಲಾಟರಿ ಮತ್ತು ಸಾಲ ರೈತರನ್ನು ನಾಶ ಮಾಡುತ್ತಿವೆ ಎಂದು ತಿಳಿಸಿದ ಸ್ವಾಮೀಜಿ ಅವರು ಪ್ರಪಂಚಲ್ಲಿ ಇಂದು ಅಶಾಂತಿ ಹೆಚ್ಚುತ್ತಿದೆ. ವಿಜ್ಞಾನ ದಿಂದ ಒಂದಡೆ ಅಭಿವೃದ್ಧಿ ಸಾಧಿಸುತ್ತಿದ್ದರೆ, ಮತ್ತೊಂದೆಡೆ ವಿನಾಶದತ್ತ ಸಾಗುತ್ತಿದ್ದೇವೆ ಎಂದು ವಿಷಾದ ವ್ಯಕ್ತಪಡಿಸಿದರು.

ಜನರಲ್ಲಿ ಜಾಗೃತಿ ಹಾಗೂ ಅರಿವು ಮೂಡಿಸುವ ಕೇಂದ್ರಗಳಾಗಿ ಸಮುದಾಯ ಭವನಗಳು ಕೆಲಸ ಮಾಡಬೇಕೇ ಹೊರತು ಕೇವಲ ವಿವಾಹ ನಡೆಸುವ ಸ್ಥಳಗಳಾಗಬಾರದು ಎಂದು ಪೂಜ್ಯ ಶ್ರೀ ಶ್ರೀಗಳವರು ಕರೆ ನೀಡಿದರು. ಸಾರ್ವಜನಿಕ ಜಾಗೃತಿ ಉಂಟು ಮಾಡುವ ಸಭೆ, ಸಮಾರಂಭಗಳು ಸಹ ಇಲ್ಲಿ ನಡೆಯಬೇಕೆಂದು ಆಶಿಸಿದರು.

ಸಮಾರಂಭದಲ್ಲಿ ಭಾಗವಹಿಸಿದ್ದ ಪುಷ್ಪಗಿರಿ ಮಠದ ಶ್ರೀ ಶ್ರೀ ನಂದೀಶ್ವರ ಸ್ವಾಮಿಗಳು ಮಾತನಾಡಿ ನಡೆದಾಡುವ ದೇವರಾಗಿರುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಅಪಾರ ಸಾಧನೆಯನ್ನು ಶ್ಲಾಘಿಸಿದರು. ಎಲ್ಲಾ ಭಕ್ತರು ಉತ್ತಮ ಆಚಾರ-ವಿಚಾರಗಳನ್ನು ಅಳವಡಿಸಿ ಕೊಂಡು ದೈವಿಕ ಭಾವನೆಗಳಿಂದ ಜೀವಿಸಬೇಕೆಂದರು.







ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ರಾಜ್ಯಸಭೆ ಸದಸ್ಯ ಶ್ರೀ ಎಚ್.ಕೆ. ಜವರೇಗೌಡ ಅವರು ಪಾಕಶಾಲೆಯನ್ನು ಉದ್ಘಾಟಿಸಿ ಮಾತನಾಡುತ್ತಾ 'ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ರಾಷ್ಟ್ರ, ರಾಜ್ಯಗಳ ದೀನ ದಲಿತರ ಆಶಾಕಿರಣವಾಗಿದ್ದಾರೆ. ಸಿದ್ಧಗಂಗಾ ಮಠದ ಆಶ್ರಯ ಸಿಗದಿದ್ದರೆ ಎಷ್ಟೋ ಜನ ವಿದ್ಯಾವಂತ ರಾಗುತ್ತಿರಲಿಲ್ಲ' ಎಂದರು.

ಸಕಲೇಶಪುರ ಶಾಸಕ ಶ್ರೀ ಬಿ.ಬಿ. ಶಿವಪ್ಪ ಮಾತನಾಡಿ ಡಾ. ಶಿವಕುಮಾರ ಸ್ವಾಮಿಗಳು ಶತಾಯುಷಿಗಳಾಗಿ ಮಾನವಕೋಟಿಯ ಉದ್ಧಾರ ಕ್ಕಾಗಿ ಧರ್ಮ ಜಾಗೃತಿಯನ್ನುಂಟು ಮಾಡಬೇಕು ಎಂದು ತಿಳಿಸಿದರು.

ಇದೇ ಸಂದರ್ಭದಲ್ಲಿ ಇತ್ತೀಚೆಗೆ ನಿಧನರಾದ ರಾಜ್ಯ ಉಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಮೂರ್ತಿ ಡಿ.ಎಂ. ಚಂದ್ರಶೇಖರ್ ಹಾಗೂ ವಿದ್ಯಾ ಇಲಾಖೆಯಲ್ಲಿ ಸೇವೆಸಲ್ಲಿಸುತ್ತಿದ್ದ ೧೧ ಜನರ ನಿಧನಕ್ಕೆ ಸಂತಾಪ ವ್ಯಕ್ತಪಡಿಸಲಾಯಿತು.

ಸಿದ್ಧಗಂಗಾ ಸ್ವಾಮೀಜಿಯವರ ದೇಹ ಮನುಷ್ಯನದಾದರೂ ಇವರ ದೇಹದಲ್ಲಿ ಪರಮಾತ್ಮ ಪ್ರವೇಶ ಮಾಡಿದ್ದಾನೆ. ಇವರು ನೀಡುತ್ತಿರುವ ಅನ್ನ ಹಾಗೂ ವಿದ್ಯಾದಾಸೋಹ ಎಲ್ಲರೂ ಪರಿಪಾಲಿಸುವ ಕಾರ್ಯವಾಗಿದೆ ಎಂದರು. ದೇವರು ಗುಡಿಯಲ್ಲಿಲ್ಲ ಮನುಷ್ಯನ ದೇಹದಲ್ಲಿ ಇರುತ್ತಾನೆ ಎಂಬುದಕ್ಕೆ ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ಅವರು ಸಾಕ್ಷಿಯಾಗಿ ದ್ದಾರೆ ಎಂದು ಬಣ್ಣಿಸಿದರು.

ವೀರಶೈವ ಸಮಾಜದವರು ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ವಿದ್ಯಾರ್ಥಿನಿಲಯ ಸ್ಥಾಪನೆ ಮತ್ತು ವಿದ್ಯಾರ್ಥಿವೇತನ ನೀಡುವಂತಹ ಕೆಲಸ ಪ್ರಾರಂಭಿಸ ಬೇಕು ಎಂದು ಕರೆ ನೀಡಿದರು. ಸಮುದಾಯ ಭವನ ಟ್ರಸ್ಟ್‌ನ ಕಾರ್ಯಾಧ್ಯಕ್ಷ ಶ್ರೀ ಬಿ.ಜಿ. ಚಂದ್ರಶೇಖರ್ ಅವರ ಸೇವಾಕಾರ್ಯವನ್ನು ಪ್ರಶಂಸಿಸಿದರು.

ಹಣಕೊಟ್ಟು ಕೆಲಸ ಮಾಡಿ ಎಂದರೂ ಕೆಲಸ ಮಾಡುವವರಿಲ್ಲದ ಈ ದಿನದಲ್ಲಿ ಇಂತಹ ಬೃಹತ್ ಸಮುದಾಯ ಭವನವನ್ನು ನಿರ್ಮಿಸಿದ ಸಮಿತಿಯವರ ಸೇವೆಯನ್ನು ಸ್ವಾಮೀಜಿ ಶ್ಲಾಘಿಸಿದರು.

ಸಂಸದ ಶ್ರೀ ಜಿ. ಪುಟ್ಟಸ್ವಾಮಿಗೌಡ ಅವರು ವಧು-ವರರ ಕೊಠಡಿ ಉದ್ಘಾಟಿಸಿ ಮಾತನಾಡಿ 'ದೈವಾಂಶ ಸಂಭೂತರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಸಿದ್ಧಗಂಗಾ ಮಠದಲ್ಲಿ ನಿತ್ಯ ೮ ಸಾವಿರ ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾದಾನ ನೀಡುತ್ತಿದ್ದು ವರ್ಣಭೇದ, ವರ್ಗಭೇದಗಳಿಲ್ಲದೆ ಆಧುನಿಕ ಬಸವೇಶ್ವರರಾಗಿದ್ದಾರೆ. ಸಮಾಜದ ಅಂಕುಡೊಂಕುಗಳನ್ನು ತಿದ್ದುವಲ್ಲಿ ಯಶಸ್ವಿಯಾಗಿದ್ದಾರೆ' ಎಂದರು.



ಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

ಸಮುದಾಯ ಭವನ ಟ್ರಸ್ಟ್‌ನ ಕಾರ್ಯಾಧ್ಯಕ್ಷ ಶ್ರೀ ಬಿ.ಜಿ. ಚಂದ್ರಶೇಖರ್ ಪ್ರಾಸ್ತಾವಿಕವಾಗಿ ಮಾತನಾಡಿದರು. ಸಮುದಾಯಭವನ ನಿರ್ಮಾಣಕ್ಕೆ ಸಹಕಾರ ನೀಡಿದ ಮತ್ತು ಸಮಾಜದ ಒಳಿತಿಗಾಗಿ ದುಡಿದವರನ್ನು ಗೌರವಿಸಲಾಯಿತು.

ನಾರ್ವೆ ಮಹಂತೇಗೌಡರು ಅಭಿನಂದಿತರ ಪರವಾಗಿ ಮಾತನಾಡಿದರು. ಮಾಜಿ ಸಂಸದ ಶ್ರೀ ವೈ.ಎನ್. ರುದ್ರೇಶಗೌಡ, ಜಿಲ್ಲಾ ವೀರಶೈವ ಸಮಾಜದ ಅಧ್ಯಕ್ಷ ಶ್ರೀ ಬಿ. ಶಿವಕುಮಾರ್, ಜಿಲ್ಲಾ ವೀರಶೈವ ಸಮಾಜದ ಮಹಿಳಾ ವಿಭಾಗದ ಅಧ್ಯಕ್ಷೆ ಶ್ರೀಮತಿ ಬಿ.ಕೆ. ಚಂದ್ರಕಲಾ, ವೀರಶೈವ ಯುವಘಟಕದ ಅಧ್ಯಕ್ಷ ಶ್ರೀ ಕೆ.ಆರ್. ಜೈಶಂಕರ್ ಹಾಜರಿದ್ದರು.

ಶ್ರೀಮತಿ ಯಶೋದಮ್ಮ ಮತ್ತು ಸಂಗಡಿಗರು ಪ್ರಾರ್ಥಿಸಿದರು, ವಕೀಲ ಶ್ರೀ ಸಿ.ಎಂ. ನಿಂಗರಾಜು ಸ್ವಾಗತಿಸಿದರು. ಶ್ರೀ ಭುವನೇಶ್ ನಿರೂಪಿಸಿದರು. ಶ್ರೀಮತಿ ಮೀನಾಕ್ಷಿ ಸೋಮಶೇಖರ್ ವಂದಿಸಿದರು. ★



ಪಂಜಾಬ್ ಸರ್ಕಾರದ ತಾಂತ್ರಿಕ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಿ.ಬಿ. ಗೋಯಲ್, ಭಾ.ಆ.ಸೇ. ಅವರು ಡಿಸೆಂಬರ್ ೨ರಂದು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು. ಅವರು ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನಾ ಸಭೆಯಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು.



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಸಾರ್ಜೆಂಟ್ ಜಿ. ಟಿ.ಎಂ. ಅನಿಲ್ ಅವರಿಗೆ ಆಶೀರ್ವಾದ

ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು, ಬಿ.ಬಿ. ರಸ್ತೆ, ತುಮಕೂರು ಸೀನಿಯರ್ ಡಿವಿಜನ್ ಎನ್‌ಸಿಸಿ ವಿದ್ಯಾರ್ಥಿ ಸಾರ್ಜೆಂಟ್ ಅನಿಲ್ ಟಿ.ಎಂ. ಕರ್ನಾಟಕ ಅಂಡ್ ಗೋವಾ ಡೈರೆಕ್ಟರ್ ಯಿಂದ ನವದೆಹಲಿಯಲ್ಲಿ ೧೧ನೇ ಅಕ್ಟೋಬರ್ ರಿಂದ ೨೧ರವರೆಗೆ ನಡೆದ ರಾಷ್ಟ್ರಮಟ್ಟದ ಆಲ್ ಇಂಡಿಯಾ ತಾಲ್ ಸೈನಿಕ (ತಾಲ್ ಸೈನಿಕ) ಕ್ಯಾಂಪ್‌ನಲ್ಲಿ ಭಾಗವಹಿಸಿ ಶೂಟಿಂಗ್ ವಿಭಾಗ ದಲ್ಲಿ ಎನ್.ಸಿ.ಸಿ. ಡೈರೆಕ್ಟರ್ ಜನರಲ್ ಬಿ.ಕೆ. ಭೂಪಣ್ಣನವರಿಂದ ಪ್ರಶಸ್ತಿ ಪತ್ರವನ್ನು ಪಡೆದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಇವರ ಸಾಧನೆ ಯನ್ನು ಮೆಚ್ಚಿ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವದಿಸಿದರು. ಈ ವಿದ್ಯಾರ್ಥಿಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸಿ.ಎನ್. ಸದಾಶಿವಯ್ಯ ಮತ್ತು ಉಪನ್ಯಾಸಕರಾದ ಹಾಗೂ ಎನ್‌ಸಿಸಿ ಆಫೀಸರ್‌ರವರಾದ ಪ್ರಭಾಕರ್, ಶ್ರೀ ಎ.ಪಿ. ಶಿವಕುಮಾರ್ ಮತ್ತು ನಗರ ಸಭೆಯ ಮಾಜಿ ಉಪಾಧ್ಯಕ್ಷ ಶ್ರೀ ಶ್ರೀನಿವಾಸ ಪ್ರಸಾದ್, ಆಶ್ರಯ ಸಮಿತಿ, ಮಾಜಿ ಸದಸ್ಯ ಶ್ರೀ ಟಿ.ಎಲ್. ಮುರಳೀಧರ್‌ರವರು ಅಭಿನಂದಿಸಿದ್ದಾರೆ.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೦೨೧. | ಶ್ರೀಮತಿ ಪಿ. ಕಾಂತಮ್ಮ<br>ಹಿರಿಯ ಶಿಕ್ಷಕಿ | ೧,೦೦೦.೦೦ |
| ೧೧೨೨. | ಶ್ರೀ ಎಂ. ಬಸವರಾಜಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೨೩.. | ಶ್ರೀಮತಿ ಬೇಬಿ ಸರೋಜ<br>ಸಹ ಶಿಕ್ಷಕರು | ೧,೦೦೦.೦೦ |
| ೧೧೨೪. | ಶ್ರೀ ರಾಜಶೇಖರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೨೫. | ಶ್ರೀ ಬಿ. ಮಹದೇವಯ್ಯ<br>ಸಹ ಶಿಕ್ಷಕರು | ೧,೦೦೦.೦೦ |
| ೧೧೨೬. | ಶ್ರೀ ಬಿ.ಎಂ. ಶಿವರುದ್ರಯ್ಯ<br>ದೈಹಿಕ ಶಿಕ್ಷಕರು | ೧,೦೦೦.೦೦ |
| ೧೧೨೭. | ಶ್ರೀಮತಿ ಜಯಮ್ಮ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೦.೦೦ |
| ೧೧೨೮. | ಶ್ರೀ ಲಿಂಗದೇವರು<br>ಗ್ರಂಥಪಾಲಕರು | ೧,೦೦೦.೦೦ |
| | ಕ್ರ.ಸಂ. ೧೧೨೧ ರಿಂದ ೧೦೨೮ರ ವರೆಗಿನ ವಿಳಾಸ<br>ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ – ೪. | |
| ೧೧೨೯. | ಶ್ರೀ ಕೆ. ಶಿವಕುಮಾರಸ್ವಾಮಿ<br>ಪ್ರಾಂಶುಪಾಲರು | ೨,೦೦೧.೦೦ |
| ೧೧೩೦. | ಶ್ರೀ ಕೆ.ಎಂ. ಹೊನ್ನಪ್ಪ<br>ಉಪನ್ಯಾಸಕರು, ಸಮಾಜಶಾಸ್ತ್ರ | ೨,೦೦೧.೦೦ |
| ೧೧೩೧. | ಶ್ರೀ ಎಸ್.ಕೆ. ಜಗದೀಶ್<br>ಇತಿಹಾಸ ಉಪನ್ಯಾಸಕರು | ೨,೦೦೧.೦೦ |
| ೧೧೩೨. | ಶ್ರೀ ಡಿ.ಎಸ್. ಚಂದ್ರಶೇಖರಯ್ಯ<br>ರಾಜ್ಯಶಾಸ್ತ್ರ ಉಪನ್ಯಾಸಕರು | ೨,೦೦೧.೦೦ |
| ೧೧೩೩.. | ಶ್ರೀ ಹೆಚ್.ಡಿ. ತಿಪ್ಪೇಸ್ವಾಮಿ<br>ಕನ್ನಡ ಉಪನ್ಯಾಸಕರು | ೨,೦೦೧.೦೦ |
| ೧೧೩೪. | ಶ್ರೀಮತಿ ಸಿ. ಪುಷ್ಪಲತಾ<br>ಇಂಗ್ಲೀಷ್ ಉಪನ್ಯಾಸಕರು | ೨,೦೦೧.೦೦ |
| | ಕ್ರ.ಸಂ. ೧೧೨೯ ರಿಂದ ೧೧೩೪ರ ವರೆಗಿನ ವಿಳಾಸ<br>ಶ್ರೀ ಗಣೇಶ ಗ್ರಾಮಾಂತರ ಸಂಯುಕ್ತ ಪದವಿ ಪೂರ್ವ ಕಾಲೇಜು,<br>ಗೂಳೂರು, ತುಮಕೂರು ತಾಲ್ಲೂಕು. | |
| ೧೧೩೫. | ಶ್ರೀ ಎಂ.ವಿ. ಶಿವರುದ್ರಯ್ಯ<br>ಕನ್ನಡ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೧೧೩೬. | ಶ್ರೀ ಹೆಚ್. ರುದ್ರಪ್ಪ<br>ದೈಹಿಕ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೨,೦೦೧.೦೦ |
| ೧೧೩೭. | ಶ್ರೀ ಕೆ.ಬಿ. ಚನ್ನಬಸವಶೆಟ್ಟಿ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು,<br>(ಪ್ರೌಢಶಾಲಾ ವಿಭಾಗ)<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦ |
| ೧೧೩೮. | ಶ್ರೀ ಎಸ್.ಪಿ. ನಾಗರಾಜು<br>ಪ್ರ.ಶಾ.ಸ.<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು,<br>(ಪ್ರೌಢಶಾಲಾ ವಿಭಾಗ)<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦ |
| ೧೧೩೯. | ಶ್ರೀ ಗುರುಮಲ್ಲಪ್ಪ<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೧೪೦. | ಶ್ರೀ ಹೆಚ್.ಎಸ್. ಸೌಭಾಗ್ಯವತಿ<br>ಸಹ ಶಿಕ್ಷಕರು, | ೨,೦೦೧.೦೦ |
| ೧೧೪೧. | ಶ್ರೀ ವೆಂಕಟಸ್ವಾಮಿ<br>ವೃತ್ತಿ ಶಿಕ್ಷಕರು | ೨,೦೦೧.೦೦ |
| ೧೧೪೨. | ಶ್ರೀ ಕೆ.ವಿ. ದೇವರಾಜು<br>'ಡಿ' ಗ್ರೂಫ್ ನೌಕರರು | ೨,೦೦೧.೦೦ |
| | ಕ್ರ.ಸಂ. ೧೧೩೯ ರಿಂದ ೧೧೪೨ರ ವರೆಗಿನ ವಿಳಾಸ<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೧೪೩. | ಶ್ರೀ ಜಯಕುಮಾರ್ ಪಾಟೀಲ್<br>ವಕೀಲರು,<br>ನಂ. ೯, 'ಮೇದಿನಿ', ನಂದಿನಿ ಲೇ ಔಟ್,<br>ದಿನ್ನೂರು ಮುಖ್ಯರಸ್ತೆ, ಆರ್.ಟಿ. ನಗರ,<br>ಬೆಂಗಳೂರು – ೫೬೦ ೦೩೨. | ೧೦,೦೦೦.೦೦ |
| ೧೧೪೪. | ಶ್ರೀಮತಿ ಕುಮುದ ರೇಣುಕಾಪ್ರಸಾದ್<br>ನಂ. ೪೭೨, ೧೧ನೇ ಮೈನ್,<br>೬ನೇ 'ಎ' ಕ್ರಾಸ್, ಆರ್.ಎಂ. ಬಡಾವಣೆ,<br>ಬೆಂಗಳೂರು – ೫೬೦ ೦೮೦. | ೧೦,೦೧.೦೦<br>(೧ನೇ ಕಂತು) |
| ೧೧೪೫. | ಶ್ರೀಮತಿ ರಮ್ಯ ಗುರುದೇವ್<br>ನಂ. ೪೭೨, ೧೧ನೇ ಮೈನ್, 'ಎ' ಕ್ರಾಸ್,<br>ಆರ್.ಎಂ.ವಿ. ಬಡಾವಣೆ,<br>ಬೆಂಗಳೂರು – ೫೬೦ ೦೮೦. | ೧೦,೦೧.೦೦<br>(೧ನೇ ಕಂತು) |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೧೪೬. | **ಶ್ರೀ ಗುರುಲಿಂಗಯ್ಯ ಬಿನ್ ಲಿಂ. ಟಿ.ಎಸ್. ರೇವಣ್ಣ**<br>ತಟ್ಟೇಕೆರೆ, ಸೋಲೂರು ಅಂಚೆ,<br>ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೫,೦೦೧.೦೦ |
| ೧೧೪೭. | **ಶ್ರೀ ಮಾರುತಿ ಕರೇಕಲ್ ಮಟ್ಟಿ**<br>ಸಹ ಶಿಕ್ಷಕರು,<br>ಕೆ.ಎಸ್.ಸಿ.ಎಸ್.ಬಿ.ಕೆ.ಆರ್.ಎಸ್. ಬಡಾವಣೆ,<br>ಕುಣಿಗಲ್,<br>ತುಮಕೂರು ಜಿಲ್ಲೆ - ೫೭೨೧೦೩.. | ೨,೦೦೧,೦೦ |
| ೧೧೪೮. | **ಶ್ರೀ ಎಸ್. ಪ್ರಭುಶಂಕರ್**<br>ನಂ. ೧೨೨, ೩ನೇ ಸ್ಟೇಜ್, ೪ನೇ ಮೈನ್,<br>೪ನೇ ಬ್ಲಾಕ್, ಬಸವೇಶ್ವರನಗರ,<br>ಬೆಂಗಳೂರು – ೫೬೦ ೦೭೯. | ೨,೦೦೧.೦೦ |
| ೧೧೪೯. | **ಶ್ರೀ ಆರ್. ಜಗದೀಶ್**<br>ನಂ. ೧೨೧, ೩ನೇ ಸ್ಟೇಜ್, ೪ನೇ ಮೈನ್,<br>೪ನೇ ಬ್ಲಾಕ್, ಬಸವೇಶ್ವರನಗರ,<br>ಬೆಂಗಳೂರು – ೫೬೦ ೦೭೯. | ೨,೦೦೧.೦೦ |
| ೧೧೫೦. | **ಶ್ರೀ ಜಿ. ಸದಾಶಿವಯ್ಯ**<br>ಮುಖ್ಯ ಶಿಕ್ಷಕರು | ೧,೦೦೦.೦೦ |
| ೧೧೫೧. | **ಶ್ರೀ ಕೆ. ಸತ್ಯನಾರಾಯಣಗುಪ್ತ**<br>ಸಹ ಶಿಕ್ಷಕರು | ೧,೦೦೦.೦೦ |
| ೧೧೫೨. | **ಶ್ರೀ ಎಸ್. ಪ್ರಸಾದ್**<br>ಸಹ ಶಿಕ್ಷಕರು | |
| ೧೧೫೩. | **ಶ್ರೀ ಪಿ.ಎಸ್. ಮಲ್ಲಿಕಾರ್ಜುನ ರಾಯಲ್**<br>ಸಹ ಶಿಕ್ಷಕರು | ೨,೦೦೧.೦೦ |
| ೧೧೫೪. | **ಶ್ರೀ ಆರ್. ನಂಜಪ್ಪ**<br>ಸಹ ಶಿಕ್ಷಕರು | ೧,೦೦೧.೦೦ |
| ೧೧೫೫. | **ಶ್ರೀ ಸಿ.ವಿ. ಬಸವರಾಜು**<br>ಸಹ ಶಿಕ್ಷಕರು | ೧,೦೦೦.೦೦ |
| ೧೧೫೬. | **ಶ್ರೀಮತಿ ಕೆ.ಎಸ್. ಲಲಿತಾಂಬ**<br>ಹಿರಿಯ ಶಿಕ್ಷಕರು | ೧,೦೦೦.೦೦ |
| ೧೧೫೭. | **ಶ್ರೀ ಬಿ. ಶೇಖರಪ್ಪ**<br>ದೈಹಿಕ ಶಿಕ್ಷಕರು | ೧,೦೦೦.೦೦ |
| ೧೧೫೮. | **ಶ್ರೀಮತಿ ಹೆಚ್.ಕೆ. ಜಯಮ್ಮ**<br>ದ್ವಿತೀಯ ದರ್ಜೆ ಸಹಾಯಕರು | ೧,೦೦೦.೦೦ |
| ೧೧೫೯. | **ಶ್ರೀಮತಿ ಕೆ. ಲಕ್ಷ್ಮಿ**<br>ದ್ವಿತೀಯ ದರ್ಜೆ ಸಹಾಯಕರು | ೧,೦೦೦.೦೦ |
| ೧೧೬೦. | **ಶ್ರೀ ಕೆ.ಎಸ್. ನರಸಿಂಹಯ್ಯ**<br>ಪ್ರ.ಶಾ.ಸ. | ೧,೦೦೦.೦೦ |
| ೧೧೬೧. | **ಶ್ರೀ ಬಿ. ಶಿವಲಿಂಗಯ್ಯ**<br>'ಡಿ' ಗ್ರೂಪ್ ನೌಕರರು | ೧,೦೦೦.೦೦ |
| ೧೧೬೨. | **ಶ್ರೀ ರಂಗನಾಥ**<br>ಸೇವಕರು | ೧,೦೦೦.೦೦ |

ಕ್ರ.ಸಂ. ೧೧೫೦ ರಿಂದ ೧೧೬೨ರ ವರೆಗಿನ ವಿಳಾಸ
**ಬೆಳದರ ಗ್ರಾಮಾಂತರ ಪ್ರೌಢಶಾಲೆ**
ಬೆಳದರ, ತುಮಕೂರು ತಾಲ್ಲೂಕು.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೧೬೩. | **ಶ್ರೀ ಹೆಚ್. ಚಂದ್ರಶೇಖರಯ್ಯ**<br>ವಿನಯ್ ಟ್ರಾಕ್ಟರ್ ಎಂಟರ್‌ಪ್ರೈಸಸ್,<br>ನಂ. ೧೧೧, (ಹಳೆ ನಂ. ೭೪),<br>ನೆಲಮಹಡಿ, ಕೆ.ಹೆಚ್. ರಸ್ತೆ,<br>ಬೆಂಗಳೂರು – ೫೬೦ ೦೨೭. | ೨೫,೦೦೦೧.೦೦ |
| ೧೧೬೪. | **ಶ್ರೀ ಕೆ. ಗಂಗಾಧರನ್**<br>ಚೀಫ್ ಏರ್‌ಕ್ರಾಫ್ಟ್ ಮೆಂಟೇನನ್ಸ್<br>ಇಂಜಿನೀಯರ್ ಗೌರ್ನಮೆಂಟ್<br>ಫ್ಲೈಯಿಂಗ್ ಟ್ರೈನಿಂಗ್ ಸ್ಕೂಲ್,<br>ಜಕ್ಕೂರು, ಬೆಂಗಳೂರು – ೬೪. | ೧೦,೦೦೦.೦೦ |
| ೧೧೬೫. | **ಶ್ರೀ ಜಿ.ಎಸ್. ಸಿದ್ಧಲಿಂಗಪ್ಪ**<br>ನಂ. ೨೬/೩೩, ೧ನೇ ಮೈನ್,<br>೪ನೇ ಕ್ರಾಸ್, ಆಜಾದ್‌ನಗರ,<br>ಬೆಂಗಳೂರು – ೧೮. | ೨,೦೦೧.೦೦ |
| ೧೧೬೬. | **ಶ್ರೀ ಎನ್. ನರಸಯ್ಯ**<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೧೬೭. | **ಶ್ರೀ ಜಿ.ಆರ್. ದೊಡ್ಡೀರಣ್ಣ**<br>ಸಹ ಶಿಕ್ಷಕರು | ೧,೦೦೧.೦೦ |
| ೧೧೬೮. | **ಶ್ರೀ ಎಸ್. ಲಿಂಗಣ್ಣ**<br>ಸಹ ಶಿಕ್ಷಕರು | ೧,೦೦೧.೦೦ |
| ೧೧೬೯. | **ಶ್ರೀ ಡಿ. ಕೋಡಿಯಪ್ಪ**<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೧೧೭೦. | **ಶ್ರೀಮತಿ ಶಾಂತ**<br>ಸಹ ಶಿಕ್ಷಕರು | ೧,೦೦೧.೦೦ |
| ೧೧೭೧. | **ಶ್ರೀ ಕೆ.ವಿ. ಹೊಸಳ್ಳಯ್ಯ**<br>ದೈಹಿಕ ಶಿಕ್ಷಕರು | ೨,೦೦೧.೦೦ |
| ೧೧೭೨. | **ಶ್ರೀ ಬಿ.ಎಸ್. ರವೀಂದ್ರನಾಥ್**<br>ವೃತ್ತಿ ಶಿಕ್ಷಕರು | ೧,೦೦೧.೦೦ |

ಕ್ರ.ಸಂ. ೧೧೬೬ ರಿಂದ ೧೧೭೨ರ ವರೆಗಿನ ವಿಳಾಸ
ಶ್ರೀ ಮಹಾಲಿಂಗೇಶ್ವರ ಪ್ರೌಢಶಾಲೆ,
ಕೋರಾ, ತುಮಕೂರು ತಾಲ್ಲೂಕು.

*(ಮುಂದುವರಿಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೫೦. | **ಶ್ರೀ ಎಸ್. ಪ್ರಸನ್ನಕುಮಾರ್**<br>ಉಪನ್ಯಾಸಕರು | ೬,೦೦.೦೦ |
| ೭೫೧. | **ಶ್ರೀ ಸಣ್ಣಸ್ವಾಮಿ**<br>ಉಪನ್ಯಾಸಕರು | ೬೦೦.೦೦ |
| ೭೫೨. | **ಶ್ರೀ ಕೆ.ಪಿ. ಪಾಪಣ್ಣ**<br>ಉಪನ್ಯಾಸಕರು | ೭೮೦.೦೦ |
| ೭೫೩. | **ಶ್ರೀ ಕೆ.ಎಸ್. ಅಮರೇಂದ್ರ**<br>ಉಪನ್ಯಾಸಕರು | ೬೦೦.೦೦ |
| ೭೫೪. | **ಶ್ರೀ ಶ್ರೀರಾಮರೆಡ್ಡಿ**<br>ಉಪನ್ಯಾಸಕರು | ೯೬೦.೦೦ |
| ೭೫೫. | **ಶ್ರೀ ಮಲ್ಲಿಕಾರ್ಜುನಗೌಡ ಪಾಟೀಲ್**<br>ಗ್ರಂಥಪಾಲಕರು | ೬೦೦.೦೦ |
| ೭೫೬. | **ಶ್ರೀ ಜಿ. ಜಯಣ್ಣ**<br>ನಿವೃತ್ತ ದೈಹಿಕ ಶಿಕ್ಷಕರು | ೩೨೦.೦೦ |
| ೭೫೭. | **ಶ್ರೀ ಬಿ. ಬಸವೇಶ**<br>ಉಪನ್ಯಾಸಕರು | ೬೦೦.೦೦ |
| ೭೫೮. | **ಶ್ರೀ ಹೆಚ್.ಎಸ್. ಗಂಗಯ್ಯ**<br>ಸೇವಕರು | ೫೦೦.೦೦ |

ಕ್ರ.ಸಂ. ೭೫೦ ರಿಂದ ೭೫೮ರ ವಿಳಾಸಗಳು
ಶ್ರೀ ಸಿದ್ಧಗಂಗಾ ಪ್ರಥಮದರ್ಜೆ ಕಾಲೇಜು, ನೆಲಮಂಗಲ.
ಬೆಂಗಳೂರು ಗ್ರಾಮಾಂತರ ಜಿಲ್ಲೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೫೯. | **ಶ್ರೀ ಎಸ್. ಶಿವಕುಮಾರ್**<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು. | ೧,೦೦೦.೦೦ |
| ೭೬೦. | **ಶ್ರೀ ಹೆಚ್. ಮಹಾಲಿಂಗಯ್ಯ**<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೭೬೧. | **ಶ್ರೀ ಆರ್. ಪ್ರಕಾಶ್**<br>ಸಹ ಶಿಕ್ಷಕರು | ೧,೦೦೧.೦೦ |
| ೭೬೨. | **ಶ್ರೀ ಜಿ.ಎಸ್. ಚಿದಾನಂದಸ್ವಾಮಿ**<br>ಸಹ ಶಿಕ್ಷಕರು | ೧,೦೦೧.೦೦ |
| ೭೬೩. | **ಶ್ರೀ ಆರ್. ಕಲ್ಲೇಶ್**<br>ಸಹ ಶಿಕ್ಷಕರು | ೧,೦೦೧.೦೦ |
| ೭೬೪. | **ಶ್ರೀ ಬಿ. ರಾಜಣ್ಣ**<br>ಸಹ ಶಿಕ್ಷಕರು | ೧,೦೦೧.೦೦ |
| ೭೬೫. | **ಶ್ರೀ ಹೆಚ್.ಎಸ್. ಈಶ್ವರಪ್ಪ**<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೭೬೬. | **ಶ್ರೀ ಡಿ.ಸಿ. ಚಿನ್ನಯ್ಯ**<br>ವೃತ್ತಿ ಶಿಕ್ಷಕರು | ೧,೦೦೧.೦೦ |
| ೭೬೭. | **ಶ್ರೀ ಟಿ.ಎಸ್. ಗಂಗಾಧರಯ್ಯ**<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೭೬೮. | **ಶ್ರೀ ಎಂ. ಲಿಂಗಯ್ಯ**<br>ಸೇವಕರು | ೧,೦೦೧.೦೦ |
| ೭೬೯. | **ಶ್ರೀಮತಿ ಎಂ. ಭಾಗ್ಯಮ್ಮ**<br>ಸೇವಕರು | ೧,೦೦೧.೦೦ |

ಕ್ರ.ಸಂ. ೭೬೦ ರಿಂದ ೭೬೯ರ ವಿಳಾಸಗಳು
ಶ್ರೀ ವಿವೇಕಾನಂದ ಪ್ರೌಢಶಾಲೆ,
ಕುಪ್ಪೂರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೭೦. | **ಶ್ರೀ ಕೆ.ಎಸ್. ಅನಂತಮೂರ್ತಿ**<br>ವ್ಯವಸ್ಥಾಪಕ ನಿರ್ದೇಶಕರು,<br>ಶ್ರೀ ಭೋಗೇಶ್ವರ ಚೇಟ್ಸ್ ಪ್ರೈ. ಲಿ.<br>ನಂ. ೧೧೦೮, ಟಿ. ೧ನೇ ಮಹಡಿ,<br>೯ನೇ 'ಸಿ' ಮುಖ್ಯರಸ್ತೆ, ಆರ್.ಪಿ.ಸಿ. ಬಡಾವಣೆ,<br>(ಬಸ್ ನಿಲ್ದಾಣದ ಎದುರು)<br>ವಿಜಯನಗರ ೨ನೇ ಹಂತ,<br>ಬೆಂಗಳೂರು – ೫೬೦ ೦೪೦. | ೧,೦೦೧.೦೦ |
| ೭೭೧. | **ಅಧ್ಯಕ್ಷರು**<br>ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾ ಸಂಸ್ಥೆಗಳ<br>ಬಳಕೆದಾರರ ಸಹಕಾರ ಸಂಘ ಲಿ.,<br>ಶ್ರೀ ಸಿದ್ಧಗಂಗಾಮಠ,<br>ತುಮಕೂರು ತಾಲ್ಲೂಕು. | ೫,೫೫೫.೦೦ |
| ೭೭೨. | **ಶ್ರೀ ಗುರುಮಲ್ಲಪ್ಪ**<br>ಮುಖ್ಯ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೭೭೩. | **ಶ್ರೀ ಶಿವಯೋಗಿ ಸಿದ್ಧರಾಮ ಸ್ವಾಮಿಗಳು**<br>ಕಸಬಾ ಹೋಬಳಿ, ಬೆಳಗುಂಬಾ,<br>ತುಮಕೂರು ತಾಲ್ಲೂಕು. | ೧,೧೦೧.೦೦ |
| ೭೭೪. | **ಶ್ರೀ ಆರ್.ಸಿ. ದೇವರಯ್ಯ**<br>'ಆಶೀರ್ವಾದ', ನಂ. ೫೮೫೮,<br>೭ನೇ ಕ್ರಾಸ್, ಸರಸ್ವತಿಪುರಂ,<br>ಸಾಲಗಾಮಿ ರಸ್ತೆ, ಹಾಸನ. | ೧,೦೦೧.೦೦ |
| ೭೭೫. | **ಶ್ರೀ ಹೆಚ್.ಜಿ. ಗಂಗಯ್ಯ**<br>(ಹಲ್ಕೂರು), ಕೇರಾಫ್<br>ಆರ್. ಮುದ್ದರಂಗಯ್ಯ,<br>ನಂ. ೯೭೮/ಎ, ೪ನೇ 'ಇ' ಬ್ಲಾಕ್,<br>೧೦ನೇ ಬಿ ಮುಖ್ಯರಸ್ತೆ, ರಾಜಾಜಿನಗರ,<br>ಬೆಂಗಳೂರು – ೫೬೦ ೦೧೦. | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೨೨೬. | ಶ್ರೀ ಚಂದ್ರಶೇಖರಯ್ಯ<br>ನಿವೃತ್ತ ಶಿಕ್ಷಕರು,<br>ಕೊಮ್ಮಘಟ್ಟ, ಸೂಲಿಬೆಲೆ ಪೋಸ್ಟ್,<br>ಕೆಂಗೇರಿ ಹೋಗಳಿ,<br>ಬೆಂಗಳೂರು ದಕ್ಷಿಣ ತಾಲ್ಲೂಕು. | ೧,೦೦೧.೦೦ |
| ೨೨೭. | ಶ್ರೀ ಎಂ. ಚನ್ನಪ್ಪ<br>ಗೋಣಿಪುರ, ಕುಂಬಳಗೋಡು,<br>ಗೊಲ್ಲಹಳ್ಳಿ ಅಂಚೆ,<br>ಬೆಂಗಳೂರು – ೫೬೦ ೦೬೦. | ೫೦೧.೦೦<br>(೧ನೇ ಕಂತು) |
| ೨೨೮. | ಶ್ರೀ ಡಿ.ಎಸ್. ಶಿವಣ್ಣ<br>ಪ್ರ.ಶಾ.ಸ.<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು,<br>ಹಾಲನೂರು, ತುಮಕೂರು ತಾ. | ೧,೦೦೧.೦೦ |
| ೨೨೯. | ಶ್ರೀ ಪುಟ್ಟರುದ್ರಯ್ಯ<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು,<br>ಹಾಲನೂರು, ತುಮಕೂರು ತಾ. | ೧,೦೦೧.೦೦ |
| ೨೩೦. | ಶ್ರೀಮತಿ ಅಂಬುಜ ಮತ್ತು ಶ್ರೀ ಜಿ.ಎಂ. ನಂಜಪ್ಪ<br>ನಂ. ೯೩೦/೪೧, 'ಶ್ರೀ ಗುರು ಕೃಪಾ',<br>೬ನೇ ಅಡ್ಡರಸ್ತೆ, ಕೊಡುಗೆಹಳ್ಳಿ,<br>ಹನುಮಯ್ಯ ಬಡಾವಣೆ,<br>ಬೆಂಗಳೂರು – ೯೨. | ೧,೦೦೧.೦೦ |
| ೨೩೧. | ಶ್ರೀ ಎನ್.ಬಿ. ಶಿವಣ್ಣ ಬಿನ್ ಶ್ರೀ ಬಸಪ್ಪ<br>ನವಿಲೆ, ನುಗ್ಗೇಹಳ್ಳಿ ಮಾರ್ಗ<br>ಚನ್ನರಾಯಪಟ್ಟಣ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦ |
| ೨೩೨. | ಶ್ರೀ ಎಂ.ಸಿ. ನಂಜುಂಡಪ್ಪ<br>ಬಿನ್ ಲೇಟ್ ಚಿಕ್ಕೇಗೌಡ<br>ಜಿ. ಮಂಚೇನಹಳ್ಳಿ, ಕುಣಿಕನಹಳ್ಳಿ ಅಂಚೆ<br>ತುರುವೇಕೆರೆ ತಾಲ್ಲೂಕು. | ೨,೦೦೧.೦೦ |
| ೨೩೩. | ಶ್ರೀ ಎಸ್. ವೀರುಪಾಕ್ಷಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ನಾರಸಂದ್ರ, ಮಾಗಡಿ ತಾಲ್ಲೂಕು.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೨೩೪. | ಶ್ರೀ ಕೆ. ವೀರಭದ್ರಯ್ಯ<br>ನಂ. ೩೧/೧ಎ, ೩ನೇ ಮುಖ್ಯರಸ್ತೆ,<br>(ಕೆ. ಗಣೇಶ ಗುಡಿ ರಸ್ತೆ), ೪ನೇ ಕ್ರಾಸ್,<br>ಚೇಳೂರು ಪಾಳ್ಯ, ಬೆಂಗಳೂರು-೨೩.. | ೧,೦೧೦.೦೦ |
| ೨೩೫. | ಶ್ರೀ ವಿ. ಮುನಿಯಪ್ಪ<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಹೆಡಕನಹಳ್ಳಿ, ಹೊಸಕೋಟೆ ತಾ.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೫೦೦.೦೦<br>(೧ನೇ ಕಂತು) |
| ೨೩೬. | ಶ್ರೀ ಕೆ.ಸಿ. ಹನುಮಂತರಾಯ<br>ಸೇವಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೨೩೭. | ಶ್ರೀ ಬಿ.ವಿ. ಷಡಾಕ್ಷರಯ್ಯ<br>ಸೇವಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೨೩೮. | ಶ್ರೀ ಜಿ.ಸಿ. ಶಿವಮೂರ್ತಿ<br>ನಂ. ೨೬, ೫ನೇ ಮುಖ್ಯರಸ್ತೆ,<br>೧೪ನೇ ಕ್ರಾಸ್, ಹೆಚ್.ಐ.ಜಿ. ಕಾಲೋನಿ,<br>ಚಿಕ್ಕಮಾರನಹಳ್ಳಿ, ಬೆಂಗಳೂರು-೯೪. | ೧,೦೦೧.೦೦ |
| ೨೩೯. | ಶ್ರೀ ಆರ್.ಎಸ್. ಗೌರಿಶಂಕರಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ಹಾಲನೂರು, ತುಮಕೂರು ತಾಲ್ಲೂಕು. | ೧,೦೦೧.೦೦ |
| ೨೪೦. | ಶ್ರೀ ಜಿ. ಶಿವನಂಜಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ಹಾಲನೂರು, ತುಮಕೂರು ತಾಲ್ಲೂಕು. | ೧,೦೦೧.೦೦ |
| ೨೪೧. | ಶ್ರೀ ಎಸ್.ಡಿ. ರೇಣುಕಪ್ರಸಾದ್<br>ಮುಖ್ಯ ಶಿಕ್ಷಕರು,<br>ಶ್ರೀ ಎಲ್ಲೇಶ್ವರ ಸಂಸ್ಕೃತ ಪಾಠಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | ೧,೦೦೦.೦೦ |
| ೨೪೨. | ಶ್ರೀಮತಿ ಸರ್ವಮಂಗಳಮ್ಮ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರಾಕ್ಟಿಸಿಂಗ್<br>ಎಲಿಮೆಂಟರಿ ಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೨೪೩. | ಶ್ರೀ ಮಂಚಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ನಾರಸಂದ್ರ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೨೪೪. | ಶ್ರೀ ಆರ್. ಶಿವರುದ್ರಯ್ಯ<br>ಗ್ರಂಥಪಾಲಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ನಾರಸಂದ್ರ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೨೪೫. | ಶ್ರೀ ಎಸ್.ಸಿ. ಸಿದ್ಧಗಂಗಯ್ಯ<br>ಸಹ ಶಿಕ್ಷಕರು,<br>ಸೋಲೂರು, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೦.೦೦ |

(ಮುಂದುವರಿಯುತ್ತದೆ)

RNI No. 17139/69 "Siddaganga" Monthly - postal Reg.No. KA/SK/TMR/385/2003-05



ಡಿಸೆಂಬರ್ ೧ರಂದು ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ೨೦೦೫ರ ದಿನದರ್ಶಿಯನ್ನು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಪತ್ರಕರ್ತರಾದ ಶ್ರೀ ಎಂ. ರೇಣುಕಾರಾಧ್ಯ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ತುಮಕೂರು ಜಿಲ್ಲಾ ಪಂಚಾಯತ್ ಉಪಕಾರ್ಯದರ್ಶಿ ಶ್ರೀ ಗೋವಿಂದರಾಜು, ಗೀತಾಂಜಲಿ ಗ್ರಾಫಿಕ್ಸ್ ಮಾಲೀಕರಾದ ಶ್ರೀ ಜಿ. ನಾಗಸುಂದರ್ ಮತ್ತು ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯ ಅವರು ಉಪಸ್ಥಿತರಿದ್ದರು.




ಅಕ್ಟೋಬರ್ ೩೧ರಂದು ದೊಡ್ಡಬಳ್ಳಾಪುರದ ಶ್ರೀ ಕೆಂಕೆರೆ ರಾಮಕೃಷ್ಣ ಚಾರಿಟಬಲ್ ಟ್ರಸ್ಟ್‌ನ ವತಿಯಿಂದ ನಿರ್ಮಾಣಗೊಂಡ ವೃದ್ಧರ ಸೇವಾಕೇಂದ್ರ 'ಜೀವನ ಸಂಜೆ'ಯ ಉದ್ಘಾಟನೆಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ನೆರವೇರಿಸಿದರು. ಈ ಸಂದರ್ಭದಲ್ಲಿ ಟ್ರಸ್ಟಿನ ಪದಾಧಿಕಾರಿಗಳು ಉಪಸ್ಥಿತರಿದರು.